# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K·R·N·N· 240 ಸಂಪುಟ : 1  ಸಂಚಿಕೆ : 15  ನವೆಂಬರ್ 1 ರಿಂದ 15–1997  ಪುಟಗಳು : 24  ರೂ. 5

ಕನ್ನಡವೇ ನಿತ್ಯ—ಕನ್ನಡವೇ ಸತ್ಯ

**ಜೈ ಕರ್ನಾಟಕ ಮಾತೆ, ತಾಯಿ ಭುವನೇಶ್ವರಿ**

# ಮಡಿಕೇರಿಯಲ್ಲಿ

# ಅರೆಭಾಷಿಕಾ ಪ್ರತಿಭಾ ಪ್ರದರ್ಶನ

ಸುಮಾರು 7 ಸಾವಿರ ವರ್ಷಗಳಷ್ಟು ಪ್ರಾಚೀನವಾದ ನಮ್ಮದೇ ಆದ ಸಂಸ್ಕೃತಿ, ಕಲೆ, ಸಾಹಿತ್ಯ, ಆಚಾರ, ವಿಚಾರ, ಪದ್ಧತಿ, ಕಟ್ಟು ಕಟ್ಟಳೆಗಳು ಅವನತಿಯ ಅಂಚಿನಲ್ಲಿರುವ ಈ ಸಂದರ್ಭದಲ್ಲಿ ಅದಕ್ಕೆ ಒತ್ತು ನೀಡಿ, ಕಾಪಾಡಿ ರಕ್ಷಿಸಿ, ಮುಂದಿನ ಪೀಳಿಗೆಗೆ ಅಡಿಪಾಯ ಹಾಕಿ, 21ನೇ ಶತಮಾನದತ್ತ ಕೊಂಡೊಯ್ಯುವ ಮಹಾ ಪ್ರಯತ್ನ ಇದಾಗಿದೆ. ಹಾಗಾಗಿ ಮುಂದಿನ ತಿಂಗಳಲ್ಲಿ (ದಿನಾಂಕವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು) ಅರೆಭಾಷಿಕರ ಪ್ರತಿಭಾ ಪ್ರದರ್ಶನವನ್ನು ಮಡಿಕೇರಿ ನಗರದಲ್ಲಿ ನಡೆಸಲು ನಿಶ್ಚಯಿಸಲಾಗಿದೆ. ಆದ್ದರಿಂದ ಆಸಕ್ತಿಯುಳ್ಳ ಭಾಷಾಪ್ರೇಮಿಗಳು ತಮ್ಮ ಹೆಸರು ಮತ್ತು ವಿವರಗಳೊಂದಿಗೆ, ದಿನಾಂಕ **15-11-97**ರೊಳಗೆ **ಸಂಚಾಲಕರು C/o ಕೊಡಗು ಸಂಗಾತಿ 322, ಹಿನಕಲ್ ಗ್ರಾಮ ಮತ್ತು ಅಂಚೆ ಮೈಸೂರು-17. ದೂರವಾಣಿ : 0821-516771 ಇಲ್ಲಿ ಸಂಪರ್ಕಿಸಬೇಕಾಗಿ ವಿನಂತಿ.**

**ವಿಷಯ**

**ಹಾಡು, ಹುತ್ತರಿ ಹಾಡು, ಕೋಲಾಟ, ಹೀಲಿಯಾಟ, ಪೀಲಿಯಾಟ, ಬಿಳಕಾಟ, ಕುಣಿತ, ಹಬ್ಬದ ಕುಣಿತ, ಜೋಗಿ ವೇಷ, ಕೋಲಗಳು, ಕೊಲೆ-ದೆವ್ವಗಳ ರೂಪಕ, ನರ್ತನ, ಸೋಭಾನೆ, ನಾಟಕ, ಹುತ್ರಿಯಲ್ಲಿ ಈಡು ತೆಗೆಯುವುದು, ಸಿದ್ಧವೇಷ ಕುಣಿತ, ಬೋಟಿಚವ್ವನ ಭೇಟಿ, ನರಿ ಪೂದ, ಭರತನಾಟ್ಯ, ಹರಿಕಥೆ, ಗೌಡ ಜನಾಂಗದ ಮೇರು ವ್ಯಕ್ತಿಗಳ ರೂಪಕಗಳು, ಛದ್ಮವೇಷ, ಹುಲಿವೇಷ, ಸ್ಥಬ್ದ ಚಿತ್ರಗಳು ಇತ್ಯಾದಿ ಇತ್ಯಾದಿ.**

**ಪ್ರಾಶಸ್ತ್ಯ : ಗೌಡ ಸಂಪ್ರದಾಯದ ಕುಪ್ಪಸದಟ್ಟಿ-ಗೇಂಟಿ, ಕೋಟು ಪಂಚೆ-ಕನ್ನಡ ಸೀರೆ**

---

**ಅರೆಭಾಷೆಗೆ ಮೊದಲ ಪ್ರಾಶಸ್ತ್ಯವನ್ನು ನೀಡಲಾಗುವುದು**

---

**ಸಮಯ : ನಾಟಕಗಳಿಗೆ 25 ರಿಂದ 30 ನಿಮಿಷಗಳು.**
**ಹಾಡುಗಳಿಗೆ 3 ರಿಂದ 5 ನಿಮಿಷಗಳು**
**ಉಳಿದವುಗಳಿಗೆ 5 ರಿಂದ 10 ನಿಮಿಷಗಳು**

**—ಸಂಚಾಲಕರು**

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :

**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :

**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :

**ಹುಲಿಮನೆ ರಮೇಶ್**

ವರದಿಗಾರ :

**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :

**ಕು॥ ಗೀತಾ ಮೋಂಟಡ್ಕ**

ಪತ್ರಿಕಾ ಪ್ರತಿನಿಧಿ :

**ಕು॥ ಧನು ಚೆರಿಯಮನೆ**

ಕಛೇರಿ ನಿರ್ವಹಣೆ :

**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಣ್ಣಿಪುರ ಧರಣಿ ಗಣಪತಿ**

ಮುದ್ರಕರು :

**ಮುಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :

**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 322, ಹಿನಕಲ್ ಗ್ರಾಮ ಮತ್ತು
ಅಂಚೆ [ಅರಳಿಕಟ್ಟೆ ಹತ್ತಿರ]
ಮೈಸೂರು–570 017.
ದೂರವಾಣಿ : **0821–516771**


## ಒಳನೋಟ



### ಅರೆ ಭಾಷಿಕ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ

ಹಿಂದೊಮ್ಮೆ ಮೈಸೂರಿನ ಕೊಡಗು ಗೌಡ ವಿದ್ಯಾರ್ಥಿ ನಿಲಯದ ವತಿಯಿಂದ ನಡೆದ ಕೈಲ್ ಮುಹೂರ್ತದ ಬಗ್ಗೆ ಖಂಡನೀಯ ಲೇಖನವನ್ನು ನಮ್ಮ ಓದುಗರು ಕಳುಹಿಸಿದ್ದರು. ಅದು "ಸಂಗಾತಿ"ಯ 13ನೇ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಇದನ್ನು ಇಲ್ಲಿ ಮತ್ತೊಮ್ಮೆ ಪ್ರಸ್ತಾಪಿಸಲು ಕಾರಣವೆಂದರೆ ಮಡಿಕೇರಿಯ ಶಾಖೆಯಾದ ಮೈಸೂರಿನ ಈ ಸಂಘದಲ್ಲಿ ಆಡಳಿತ ವರ್ಗವಿರುವುದು ಎಲ್ಲರಿಗೂ ತಿಳಿದ ವಿಷಯ. ಇಲ್ಲಿ ಅಧ್ಯಕ್ಷ, ಕಾರ್ಯದರ್ಶಿ, ನಿರ್ದೇಶಕರುಗಳಿದ್ದಾರೆ. ಹೀಗೆ ಕೆಲವು ದಿನಗಳ ಹಿಂದೆ ಈ ಸಂಘದ ಕಾರ್ಯದರ್ಶಿ ಬಾಳಾಡಿ ಉತ್ತಯ್ಯನವರು ರಾಜಿನಾಮೆ ಸಲ್ಲಿಸಿದ್ದಾರೆ. ಬೆರಳೆಣಿಕೆಯಷ್ಟಿರುವ ಸದಸ್ಯ ವೃಂದವನ್ನು ಹೊಂದಿರುವ ಈ ಸಂಘದಲ್ಲಿ ಈ ಅಲ್ಪಾವಧಿಯಲ್ಲಿ ಕಾರ್ಯದರ್ಶಿಯೊಬ್ಬರು ರಾಜಿನಾಮೆ ಸಲ್ಲಿಸಿರುವುದು ಶೋಚನೀಯ. ಹೀಗೇಕಾಯಿತು ? ಇಲ್ಲಿರುವ ಆಡಳಿತ ವರ್ಗದ ಕಾರ್ಯನಿರ್ವಹಣೆ ಉಚ್ಚಮಟ್ಟದಲ್ಲಿಲ್ಲವೇ ? ಸದಸ್ಯರ ಹೊಂದಾಣಿಕೆಯಿಲ್ಲವೆ ? ಅಥವಾ ಕಾಣದ ಮೂರನೇ ವ್ಯಕ್ತಿ ಇಲ್ಲಿ ಆಡಳಿತ ನಡೆಸುತ್ತಿದ್ದಾನೆಯೇ ? ಏನೇ ಆದರೂ ಬಾಳಾಡಿ ಉತ್ತಯ್ಯ ಒಬ್ಬ ಚಟುವಟಿಕಾ ವ್ಯಕ್ತಿಯಾಗಿ ರಾಜಿನಾಮೆ ಸಲ್ಲಿಸಿರುವುದು ಸೂಕ್ತವಲ್ಲ ಎಂಬುದು ನಮ್ಮ ಅಭಿಪ್ರಾಯ. ಇವರು ರಾಜಿನಾಮೆ ಸಲ್ಲಿಸಿ ಸುಮಾರು ಎರಡು ತಿಂಗಳಾಗುತ್ತಾ ಬಂದಿದೆ ಹೀಗಿದ್ದರು ಇನ್ನು ಯಾವುದೇ ತೀರ್ಮಾನ ತೆಗೆದುಕೊಳ್ಳದಿರುವುದನ್ನು ನೋಡಿದರೆ ಅದು ದುರಾಡಳಿತದ ಲಕ್ಷಣವೇ ಸರಿ.

ಸಂಘದ (ಮೈಸೂರು) ಅಂಗಳದಲ್ಲಿ ಅಸ್ಥಿಪಂಜರದಂತೆ ನಿಂತಿರುವ ಕಬ್ಬಿಣದ ಸರಳುಗಳು, ಕಲ್ಲುಗಳು, ಅಡಿಪಾಯ ಹಿಂದಿನ ಕಾಲದ ಯುದ್ಧದಲ್ಲಿ ನಾಶಹೊಂದಿದ ಪಡಶಾಲೆಯಂತೆ ರಾಜರ ಇತಿಹಾಸವನ್ನು ಹೇಳುವಂತಿದೆ. ಅದು ರೂಪುಗೊಳ್ಳಬೇಕಿದೆ. ಈ ನಿಟ್ಟಿನಲ್ಲಿ ನಿಧಾನಗತಿ ಅಗತ್ಯವಿಲ್ಲವೆನ್ನಿಸಿದೆ. ಈ ಸಂಘದ ಗೇಟು ವಯಸ್ಸಾದ ವ್ಯಕ್ತಿಯ ಮುರಿದ ಹಲ್ಲಿನಂತಿದೆ. ಇವುಗಳೆಲ್ಲವು ಒಂದು ಮಟ್ಟದಲ್ಲಿ ರೂಪುಗೊಂಡರೆ ಅದು ಸಹಜ ಶುಭ ಸೂಚಕವಲ್ಲವೇ ?

## ಕ್ರಿಮಿನಾಶಕಗಳು

ರೈತರ ಪಾಲಿಗೆ ಕ್ರಿಮಿ-ಕೀಟಗಳ ಬಾಧೆ ಇಲ್ಲದೆ ಹೋದರೆ ಒಳ್ಳೆಯದೇ. ಆದರೆ ಕ್ರಿಮಿನಾಶಕ ರಾಸಾಯನಿಕ ವಸ್ತುಗಳ ತಯಾರಿಕರಿಗೆ ? ಕ್ರಿಮಿಗಳೇ ಇಲ್ಲದಿರುವಾಗ ಕ್ರಿಮಿನಾಶಕಗಳನ್ನು ಕೇಳುವವರು ಯಾರು ?

1996–97ರಲ್ಲಿ ದೇಶದ ಕೃಷಿ ಕ್ಷೇತ್ರದಲ್ಲಿ ಕ್ರಿಮಿ ಕೀಟಗಳ ಹಾವಳಿ ಕಡಿಮೆ ಇತ್ತು. ಆದ್ದರಿಂದ ಅಗ್ರೋ ಕೆಮಿಕಲ್ಸ್ ಉದ್ಯಮದ ಒಂದು ಭಾಗಕ್ಕೆ ಪೆಟ್ಟು ಬಿತ್ತು.

ಈ ಕ್ಷೇತ್ರದಲ್ಲಿ ಬಹುರಾಷ್ಟ್ರೀಯ ಸಂಸ್ಥೆಗಳ ಪಾತ್ರ ಗಣನೀಯ ಪ್ರಮಾಣದ್ದು. ದೇಶೀ ಕಂಪೆನಿಗಳಿಗೇ ಭಾರೀ ಪೆಟ್ಟು ಬಿದ್ದಿರುವುದು.

ಯುನೈಟೆಡ್ ಫಾಸ್ಫರಸ್ ನಂತರ ಸಂಸ್ಥೆಯ ಷೇರು ಬೆಲೆ 1996ರ ಜೂನ್‌ನಲ್ಲಿ 320ರ ಆಜೂಬಾಜು. ರ್‍ಯಾಲೀಸ್ 265ರಿಂದ ಬಿದ್ದಿದೆ. ಸರ್ಲ್ ಇಂಡಿಯಾ 100 ರೂಪಾಯಿಗಳಿಂದ 60ಕ್ಕೆ ಬಿದ್ದಿದೆ.

ಈಗಲೂ ಅಗ್ರೋ ಕೆಮಿಕಲ್ಸ್ ಉತ್ಪಾದನಾ ಸಂಸ್ಥೆಗಳ ಷೇರುಗಳನ್ನು ಮಾರುವವರ ಸಂಖ್ಯೆ ಹೆಚ್ಚು. ಕೃಷಿಯಂತೆಯೇ ಅಗ್ರೋ ಕೆಮಿಕಲ್ಸ್ ಉದ್ಯಮ ವಲಯದ ಭವಿಷ್ಯವೂ ಮಳೆ, ಕ್ರಿಮಿ-ಕೀಟಗಳ ಹಾವಳಿಯ ಪ್ರಮಾಣವನ್ನೇ ಅವಲಂಬಿಸಬೇಕು.

ಅನಿಶ್ಚಿತ ಸ್ಥಿತಿಗೆ ಇದೊಂದು ಉದಾಹರಣೆ. ● ಸಂಗ್ರಹ

## ಕಣ್ಣುಗಳ ಭಿನ್ನತೆ

ಸೂರ್ಯ-ಚಂದ್ರ—ಪ್ರಪಂಚದ ಕಣ್ಣುಗಳು
ಸುಖ-ದುಃಖ—ಬಾಳಿನ ಕಣ್ಣುಗಳು
ನ್ಯಾಯ-ಅನ್ಯಾಯ ಕಾನೂನಿನ ಕಣ್ಣುಗಳು
ನೋಟವ ನೋಡಲು—ಮಾನವನ ಕಣ್ಣುಗಳು
ಮೇಲು ಕೀಳು—ಸಮಾಜದ ಕಣ್ಣುಗಳು

● ಕೆ. ಕೆ. ಕಾಳಯ್ಯ, ಆಲೂರು ಸಿದ್ದಾಪುರ

## ಜನನಾಯಕನಾಗಿ ಹೋರಾಟದಿಂದ ಸಾಧನೆಯತ್ತ

# ಶಾಸಕ ದಂಬೆಕೋಡಿ ಸುಬ್ರಾಯ ಮಾದಪ್ಪ

ಸಂದರ್ಶನ : **ಪಟ್ಟಡ ಶಿವಕುಮಾರ್**



**ದಂಬೆಕೋಡಿ ಸುಬ್ರಾಯ ಮಾದಪ್ಪ**

**ಸು**ಮಾರು ಹತ್ತು ಹನ್ನೆರಡು ವರ್ಷಗಳ ಹಿಂದಿನ ಮಾತಿದು "ಇಲ್ಲಿ ಕೆಲವೇ ಪಾಕಿಸ್ತಾನಿಯರಿರಬಹುದು ಅವರ ಮತಗಳು ನನಗೆ ಬೇಕಿಲ್ಲ" ಎಂಬ ವೀರ ಘರ್ಜನೆಯು ಪರ್ವತಗಳ ಕೇರಿ ಮಡಿಕೇರಿಯಲ್ಲಿ ಮೊಳಗಿತು. ಅಲ್ಲಿ ನೆರೆದಿದ್ದ ಪ್ರತಿಯೊಬ್ಬ ಹಿಂದುವಿನ ಅಂತಃಕರಣ ಆ ಧ್ವನಿಯನ್ನು ಪ್ರತಿಬಿಂಬಿಸಿತು. ಆ ಧ್ವನಿಯು ಹಿಂದೂ ಎಂದರೆ ವಿಶಾಲವಾದ ರಾಷ್ಟ್ರೀಯ ಮನೋಭಾವನೆಯನ್ನು, ಪಾಕಿಸ್ತಾನಿಯರೆಂದರೆ ರಾಷ್ಟ್ರದ್ರೋಹಿಗಳನ್ನು ಮಾತ್ರ ಸೂಚಿಸಿತ್ತು. 'ರಾಷ್ಟ್ರ ವಿರೋಧಿಗಳಾಗಿದ್ದರೇನು ನನಗೆ ಕುರ್ಚಿ ಸಿಗಬೇಕು' ಎನ್ನುವ ಮನೋಭಾವನೆಯನ್ನೇ ರಾಜಕಾರಣಿಗಳು ಹೊಂದಿರುವ ಇಂದಿನ ಪರಿಸ್ಥಿತಿಯಲ್ಲಿ ಅಂತಹ ವೀರಘರ್ಜನೆ ಮಾಡಿದ 'ಹುಲಿ'ಯೇ ಇಂದಿನ ಮಡಿಕೇರಿ ವಿಧಾನಸಭಾ ಕ್ಷೇತ್ರದ ಶಾಸಕ ದಂಬೆಕೋಡಿ ಸುಬ್ರಾಯ ಮಾದಪ್ಪ.

ಕಾವೇರಿಯ ಸುಪುತ್ರ, ಕೊಡಗಿನ ಹುಲಿ, ಹುಟ್ಟು ಹೋರಾಟಗಾರ ಎಂದೆಲ್ಲಾ ತಮ್ಮ ಅಭಿಮಾನಿಗಳಿಂದ ಕರೆಯಲ್ಪಟ್ಟು, ಅಪಾರ ಯುವಕರ ಬೆಂಬಲವನ್ನಾಧರಿಸಿ 1994ರ ವಿಧಾನ ಸಭಾ ಚುನಾವಣೆಯಲ್ಲಿ ಭಾರೀ ಮತಗಳ ಅಂತರದಿಂದ ಜಯಗಳಿಸಿ ಇಂದು ಶಾಸಕರಾಗಿರುವ ಇವರನ್ನು ಕೊಡಗು ಸಂಗಾತಿ'ಯು ಮಾತಿಗೆಳೆದಾಗ ಮೂಡಿಬಂದ ಅನುಭವ, ಸಲಹೆಗಳನ್ನು ನಿಮ್ಮ ಮುಂದಿಡುತ್ತಿದ್ದೇವೆ.

**ಕೊಡಗು ಸಂಗಾತಿ :** ನೀವು ರಾಜಕೀಯಕ್ಕೆ ಬರಲು ಪ್ರೇರಣೆಯೇನು ?

**ಉತ್ತರ :** ನಮ್ಮದು ರಾಜಕೀಯ ಕುಟುಂಬವಲ್ಲದೇ ಇದ್ದರೂ, ಸ್ವಾತಂತ್ರ್ಯ ಬಂದ ಮೇಲೆ ನಮ್ಮ ತಂದೆಯವರನ್ನೊಳಗೊಂಡ ತಂಡ ನಾಡಿನ ಅಭಿವೃದ್ಧಿ ಮತ್ತು ರಾಜಕೀಯದಲ್ಲಿ ಕಾರ್ಯ ನಿರ್ವಹಿಸುತಿತ್ತು. ಆದರೆ ಅದು ನನ್ನ ಮೇಲೇನೂ ಪ್ರಭಾವ ಬೀರಲಿಲ್ಲ. ನಾನು ಕಾಲೇಜಿನಲ್ಲಿದ್ದಾಗ ಯುವಕರ ಸಂಘಟನೆಯನ್ನು ಮಾಡುತ್ತಿದ್ದೆ. ಇದೇ ಸಂದರ್ಭದಲ್ಲಿ ನಾವು ಜೇನು ಕೃಷಿಯ ಬಗ್ಗೆ ಒಂದು ಯೋಜನೆಯನ್ನು ಹಾಕಿಕೊಂಡಿದ್ದೆವು. ಅದಕ್ಕೆ ದೇಶ, ವಿದೇಶಗಳಿಂದ ಉತ್ತಮ ಪ್ರೋತ್ಸಾಹ ದೊರಕಿತ್ತು. ಪೂಜಾರಿ ಮೊಣ್ಣಪ್ಪನವರೂ ಆ ಸಂದರ್ಭದಲ್ಲಿ ಮಾರ್ಗದರ್ಶನ ನೀಡಿದ್ದರು. ಆದರೆ ಎ. ಕೆ. ಸುಬ್ಬಯ್ಯನವರು ಆ ವಿಷಯಕ್ಕೆ ವಿರೋಧ ವ್ಯಕ್ತಪಡಿಸಿ ಆ ಯೋಜನೆ ವಿಫಲಗೊಳ್ಳಲು ಕಾರಣವಾದರು. ಇದರಿಂದ ಹಲವಾರು ಯುವಕರಿಗೆ ನಿರಾಶೆಯಾಯಿತು. ಇದರಿಂದ 1977ರಲ್ಲಿ ನಾನು ಪಕ್ಷೇತರನಾಗಿ ಸುಬ್ಬಯ್ಯನವರ ವಿರುದ್ಧ ಸ್ಪರ್ಧಿಸಿದೆ. ಮುಂದೆ ಬಿ. ಜೆ. ಪಿ.ಯ ಸಕ್ರಿಯ ಕಾರ್ಯಕರ್ತನಾಗಿ ಈಗ ಈ ಹಂತಕ್ಕೆ ಬಂದಿದ್ದೇನೆ.

**ಸಂ :** ನೀವು ಚುನಾವಣೆಯಲ್ಲಿ ಭಾರೀ ಅಂತರದಿಂದ ಜಯಗಳಿಸಲು ಕಾರಣವೇನು?

**ಉ :** ಮಡಿಕೇರಿ ಕ್ಷೇತ್ರದ ಎಲ್ಲಾ ವರ್ಗದ ಜನರ ಆಶೀರ್ವಾದವೇ ನಾನು ಗೆಲ್ಲಲು ಕಾರಣವಾಯಿತು. ಈ ಹಿಂದೆ 1985 ಮತ್ತು 1989ರಲ್ಲಿ ಚುನಾವಣೆಗೆ ಸ್ಪರ್ಧಿಸಿದ್ದೆ. ರಾಷ್ಟ್ರವಿರೋಧಿಗಳ ಮತಗಳನ್ನು ನಾವು ಅಪೇಕ್ಷಿಸುವುದಿಲ್ಲ. ಹಿಂದೂ ಸಂಘಟನೆಯೇ ಕೊಡಗಿನ ಮೂರು ಕ್ಷೇತ್ರಗಳಲ್ಲಿ ಬಿ.ಜೆ.ಪಿ ಗೆಲ್ಲಲು ಮೂಲ ಕಾರಣ. ರಾಷ್ಟ್ರವಿರೋಧಿ ಶಕ್ತಿಗಳನ್ನು ಸದೆಬಡಿಯುವ ಕಾರ್ಯದಲ್ಲಿ ಬಿ.ಜೆ.ಪಿ.ಯು ಮುಂಚೂಣಿಯಲ್ಲಿರುವುದರಿಂದಲೇ ಇದು ಇಂದು ಅತ್ಯಂತ ದೊಡ್ಡ ಪಕ್ಷವಾಗಿ ಹೊರಹೊಮ್ಮಿದೆ.

**ಸಂ :** ಹಾಗಾದರೆ ಬಿ.ಜೆ.ಪಿ ಮುಸ್ಲಿಂ ವಿರೋಧಿಯೇ ?

**ಉ :** ಹಾಗೇನಿಲ್ಲ, ನಾವು ಅವರನ್ನು 'ಓಟ್‌ಬ್ಯಾಂಕ್'ಆಗಿ ಪರಿವರ್ತಿಸಿಲ್ಲ. ದೇಶದ ಮುಖ್ಯವಾಹಿನಿಯಲ್ಲಿ ಒಂದಾಗಿ ಬೆರೆಯುವಂತೆ ಪ್ರೋತ್ಸಾಹಿಸುತ್ತಿದ್ದೇವೆ. ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದೇವೆ. ರಾಷ್ಟ್ರವಿರೋಧಿ ಚಟುವಟಿಕೆಯಲ್ಲಿ ತೊಡಗಿದಾಗ ನಾವು ವಿರೋಧಿಸುತ್ತೇವೆ. ಈಗ ಅವರಿಗೂ ಅದು ಚೆನ್ನಾಗಿ ತಿಳಿದಿದೆ.

**ಸಂ :** ದೇಶದ ಆಶಾಕಿರಣವಾಗಿರುವಂತ ನಿಮ್ಮ ಪಕ್ಷದಲ್ಲಿ ಭಿನ್ನಮತ ಏಕೆ ಕಂಡು ಬರುತ್ತಿದೆ ?

**ಉ :** ಬಿ. ಜೆ. ಪಿ. ಯಲ್ಲಿರುವವರು ಪ್ರಾಮಾಣಿಕರು, ಸಚ್ಚಾರಿತ್ರವುಳ್ಳವರು ಎಂದು ಜನರಿಗೆ ತಿಳಿದಿದೆ. ಆದರೆ ಬೆರಳೆಣಿಕೆಯ ಮಂದಿ ಪಕ್ಷದಲ್ಲಿದ್ದುಕೊಂಡು ಇಂತಹ ಪಕ್ಷದ ಹೆಸರಿಗೆ ಮಸಿ ಬಳಿಯುವ ಕೆಲಸ ಮಾಡುತ್ತಿದ್ದಾರೆ. ಅದೊಂದು ಬೆರಳಿಗೆ ಉಂಟಾದ ಕ್ಯಾನ್ಸರ್‌ನಂತೆ. ಅದನ್ನು ಕತ್ತರಿಸಿ ಶರೀರ ಭಾಗಕ್ಕೆ ಹರಡದಂತೆ ತಡೆಗಟ್ಟುತ್ತೇವೆ. ನಮ್ಮ ಪಕ್ಷ ಈಗ ತಾನೆ ಎದ್ದು ನಡೆಯಲು ಪ್ರಾರಂಭಿಸಿದೆ, ಆಗ ಎಡವುದು ಸಹಜ ತಾನೆ. ಆದರೆ ಬಿ.ಜೆ.ಪಿ. ಇಂದು ದೇಶದ ಆಶಾಕಿರಣವಾಗಿಯೇ ಉಳಿದಿದೆ.

**ಸಂ :** ಶಾಸಕರಾಗುವ ಮೊದಲು ನೀವು ಬಹಳ ರಾಜಕೀಯ ಹೋರಾಟ ಮಾಡುತ್ತಿದ್ದಿರಿ. ಈಗ ನಿಮ್ಮ ಹೋರಾಟ ಕಡಿಮೆಯಾಗಿದೆಯೇ ?

**ಉ :** ಅಧಿಕಾರಕ್ಕೆ ಬರಲು ಒಂದು ರಾಜಕೀಯವಿರುತ್ತದೆ. ಆದರೆ ಅಧಿಕಾರಕ್ಕೆ ಬಂದಮೇಲೆ ನಾವಿಂದು ಜನಪ್ರತಿನಿಧಿಗಳು, ನಮಗೆ ಜವಾಬ್ದಾರಿಯಿದೆ. ಇಂದು ಜನಪರ ಕಾರ್ಯಗಳಲ್ಲಿ ನನ್ನನ್ನು ತೊಡಗಿಸಿಕೊಂಡಿದ್ದೇನೆ. ಅನಗತ್ಯವಾಗಿ ನಾವು ಅಧಿಕಾರಿಗಳ ವಿರುದ್ಧ ಹೋರಾಡುವುದು ತಪ್ಪಾಗುತ್ತದೆ. ಇಂದು ಎಲ್ಲಾ ಸಾಮಗ್ರಿಗಳನ್ನು ಕೆಲಸಕ್ಕೆಂದು ಜೋಡಿಸಿ ಮಳೆ ಕಳೆದು ಇನ್ನೇನು ಕೆಲಸ ಪ್ರಾರಂಭಿಸುತ್ತೇವೆ ಎನ್ನುವಾಗ ಕೆಲವರು ಹೋರಾಟ ನಡೆಸುತ್ತಾರೆ. ಏಕೆಂದರೆ ಅವರಿಗೆ ಗೊತ್ತು ಆ ಕೆಲಸ ನಡೆದೇ ತೀರುತ್ತದೆಂದು, ಅನಂತರ ನಾವು ಹೋರಾಟ ಮಾಡಿದ್ದರಿಂದಲೇ ಆ ಕೆಲಸ ನಡೆಯಿತೆಂದು ಹೇಳಿಕೊಳ್ಳುತ್ತಾರೆ. ಇದು ಜನರ ಗಮನ ಸೆಳೆಯುವ ತಂತ್ರವಷ್ಟೆ. ಪುತ್ತೂರಿನಲ್ಲಿ ಸೌಮ್ಯಭಟ್ ಕೊಲೆಯಾದಾಗ ನಾವು ಹೋರಾಟ ಮಾಡುತ್ತೇವೆಂದು ವಿರೋಧಿಗಳು ಕಾಯುತ್ತಿದ್ದರು. ನಾವು ಹೋರಾಟ ಮಾಡಿದ್ದರೆ ನಮ್ಮ ಒಂದೈವತ್ತು ಯುವಕರು ಬಳ್ಳಾರಿ ಜೈಲಿಗೆ ಹೋಗುತ್ತಿದ್ದರು. ಅದರ ಅವಶ್ಯಕತೆಯಿರಲಿಲ್ಲ. ಅಗತ್ಯ ಬಿದ್ದಾಗ ಹೋರಾಟ ಮಾಡುತ್ತೇವೆ.

**ಸಂ :** ನೀವು ಶಾಸಕರಾದ ಮೇಲೆ ಕೈಗೊಂಡ ಜನಪರ ಕಾರ್ಯಕ್ರಮಗಳೇನು?

**ಉ :** ಇಂದು ರಾಜ್ಯದಲ್ಲಿ, ರಾಷ್ಟ್ರದಲ್ಲಿ ಬೇರೆ ಸರ್ಕಾರಗಳಿವೆ. ಅದೆಲ್ಲಕ್ಕಿಂತ ಮುಖ್ಯವಾಗಿ ಜನರೊಡನೆ ಸಕ್ರಿಯವಾಗಿ ಕಾರ್ಯನಿರ್ವಹಿಸಬೇಕಾದ ಜಿಲ್ಲಾ ಪಂಚಾಯತ್ ಕೂಡ ಬೇರೆ ಪಕ್ಷದ ಆಡಳಿತದಲ್ಲಿದೆ. ನೈಜ ಜನಪ್ರತಿನಿಧಿಯಾಗಿ ಆಯ್ಕೆಯಾಗದವರು ಜಿಲ್ಲಾ ಉಸ್ತುವಾರಿ ಮಂತ್ರಿಯಾಗಿದ್ದಾರೆ. ಇದರಿಂದ ಜನ ನಿರೀಕ್ಷಿಸಿದಷ್ಟು ಕೆಲಸ ಮಾಡಲಾಗದು. ಆದರೂ ನಾನಿಂದು ಜನರ ಸಹಕಾರದೊಡನೆ ಹಲವಾರು ಕಾರ್ಯಕ್ರಮಗಳನ್ನು ನಿರ್ವಹಿಸಿದ್ದೇನೆ. ಸುಬ್ರಹ್ಮಣ್ಯ ರಸ್ತೆ, ಕರಿಕೆ ರಸ್ತೆ ಇವೆಲ್ಲ ಜನರ ಸಹಕಾರದ ಫಲವಾದರೆ, ಆಡಳಿತ ಪಕ್ಷದೊಡನೆ ಹೊಂದಿಕೊಂಡು ಸುಮಾರು 13 ಸೇತುವೆಗಳ ನಿರ್ಮಾಣ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆಗಳ ನಿರ್ಮಾಣ ಮಾಡುತ್ತಿದ್ದೇವೆ. ಬೇರೆ ಜಿಲ್ಲೆಗಳಿಗೆ ಹೋಲಿಸಿದರೆ ನಮ್ಮ ಜಿಲ್ಲೆಯ ರಸ್ತೆಗಳು ಪರವಾಗಿಲ್ಲ ಎನ್ನುವ ಮಟ್ಟಿಗೆ ತಲುಪಿವೆ. ಇಂದು ಕೆಲವು ಬೈಪಾಸ್ ರಸ್ತೆಗಳ ಅಗತ್ಯ ಬಹಳವಾಗಿದೆ. ಅದರಲ್ಲೂ ಮಡಿಕೇರಿಯಿಂದ ಕವಳೆ, ಬೆಟ್ಟತ್ತೂರು, ಚೇರಂಭಾಣೆಯನ್ನು ಸಂಪರ್ಕಿಸುವ ರಸ್ತೆಯನ್ನು ಅಭಿವೃದ್ಧಿ ಪಡಿಸಿದಲ್ಲಿ ಭಾಗಮಂಡಲದ ಅಭಿವೃದ್ಧಿಗೆ ಒತ್ತು ನೀಡಿದಂತಾಗುತ್ತದೆ. ಇಂದು ನಮ್ಮ ಜನರಲ್ಲಿ ರಸ್ತೆಯ ಮೇಲೆ ಬೆಳೆದಿರುವ ಗಿಡಗಳನ್ನು ಕಡಿದು ಬದಿಗೆ ಹಾಕುವ ಮನೋಭಾವ ಬೆಳೆಯಬೇಕು ಆದರೆ ತೋಟದಿಂದ ಕಡಿದು ರಸ್ತೆಗೆ ಹಾಕುವ ಪದ್ಧತಿ ರೂಢಿಸಿಕೊಂಡಿದ್ದಾರೆ ಇದೊಂದು ದುರಂತ. ಇಂದು ಸರ್ಕಾರದಿಂದ ಒಂದು ಕಿ. ಮೀ. ರಸ್ತೆಗೆ ಕೇವಲ 30,000 ರೂ. ಬಿಡುಗಡೆಯಾಗುತ್ತಿದೆ. ಆದರೆ ಅದಕ್ಕೆ ತಗಲುವ ವೆಚ್ಚ ಸುಮಾರು 5 ಲಕ್ಷವಾಗುತ್ತಿದೆ.

**ಸಂ :** ಭ್ರಷ್ಟಾಚಾರ ನಿರ್ಮೂಲನೆಗೆ ನಿಮ್ಮ ಕ್ರಮಗಳೇನು ?

**ಉ :** ಬಿ.ಜೆ.ಪಿ. ಶಾಸಕರಾದ ನಾವು ಕೊಡಗಿನಲ್ಲಿ ಲಂಚ ತೆಗೆದುಕೊಳ್ಳುತ್ತಿಲ್ಲ. ಇಂದು ಪರ್ಸೆಂಟೇಜ್ ರಾಜಕೀಯ ಪ್ರಾರಂಭವಾಗಿಬಿಟ್ಟಿದೆ. ಬೇರೆ ಕಡೆಗಳಲ್ಲಿ ಜನಪ್ರತಿನಿಧಿಗಳು ಆಯ್ಕೆಯಾಗಲು 30–40 ಲಕ್ಷ ಖರ್ಚು ಮಾಡುತ್ತಾರೆ. ಅದನ್ನು ತುಂಬಲು ಅವರಿಗೆ ಲಂಚದ ಅವಶ್ಯಕತೆಯಿದೆ. ನಾವು ಒಂದೂವರೆ ಲಕ್ಷ ಖರ್ಚು ಮಾಡುತ್ತೇವೆ. ಅದನ್ನೂ ಕಾರ್ಯಕರ್ತರೇ ಭರಿಸುವುದರಿಂದ ನಮಗೆ ಲಂಚದ ಅವಶ್ಯಕತೆಯಿಲ್ಲ. ನಾವು ಲಂಚ ತೆಗೆದುಕೊಳ್ಳದೇ ಇರುವುದರಿಂದ ನಾವು ಅವರಿಗೆ ಮಾನಸಿಕವಾಗಿ ಲಗಾಮು ಹಾಕಿರುತ್ತೇವೆ. ಹೀಗೆ ಮೇಲ್ಮಟ್ಟದಿಂದಲೇ ಭ್ರಷ್ಟಾಚಾರವನ್ನು ನಿರ್ಮೂಲನಗೊಳಿಸಿದರೆ ಮಾತ್ರ ದೇಶ ಭ್ರಷ್ಟ ಮುಕ್ತವಾಗಬಲ್ಲದು. ಮೇಲ್ಭಾಗದಿಂದ ಕಸವನ್ನೂ ಗುಡಿಸಿದರೆ ಮಾತ್ರ ಅದು ಶುಚಿಯಾಗಬಲ್ಲದು. ಕೆಳಗಿನಿಂದ ಮೇಲೆ ಗುಡಿಸಿದರೆ ಶುಚಿಯಾಗುತ್ತದೆಯೇ?

**ಸಂ :** ಕೊಡಗು ಪ್ರತ್ಯೇಕ ರಾಜ್ಯವಾದರೆ ಅಭಿವೃದ್ಧಿಗೊಳ್ಳಬಹುದೇ ?

**ಉ :** ಅದೊಂದು ತಪ್ಪು ಕಲ್ಪನೆಯಷ್ಟೇ. ನಮ್ಮಲ್ಲಿ ಅಖಂಡ ಭಾರತದ ಕಲ್ಪನೆಯಿರಬೇಕು. ಇಂದು ಕೊಡಗಿನಿಂದ 150 ಕೋಟಿ ರೂಪಾಯಿ ಆದಾಯ ಬರು

[14ನೇ ಪುಟ ನೋಡಿ]

# ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ 1837ರ ಸ್ವಾತಂತ್ರ್ಯ ಸಂಗ್ರಾಮ

[ಹಿಂದಿನ ಸಂಚಿಕೆಯಿಂದ]

ಲೇಖನ : **ಪೂಜಾರಿ ಮೊಣ್ಣಪ್ಪ**

ಬ್ರಿಟೀಷ್ ಸರ್ಕಾರ ಮುಂದುವರಿದರೆ ರೈತರೆಲ್ಲಾ ತಮ್ಮ ಆಸ್ತಿ ಪಾಸ್ತಿಯನ್ನು ಸಾಹುಕಾರರಿಗೆ ಮಾರಿ ಅವರ ಕೂಲಿಯಾಳುಗಳಾಗಿ ಕೆಲಸ ಮಾಡುವ ಅಥವಾ ಊರು ಬಿಟ್ಟು ಬೇರೆ ಕಡೆಗೆ ಕೂಲಿಯಾಳುಗಳಾಗಿ ಹೋಗುವ ಸಂಭವ ಬರುವುದೆಂದೂ ಇಷ್ಟರವರೆಗೆ ಅನುವಂಶಿಕವಾಗಿ ಅನುಭವಿಸಿಕೊಂಡು ಬಂದ ಹಕ್ಕು ತಪ್ಪಿ ಪರಕೀಯರ ರಾಜ್ಯಭಾರದಲ್ಲಿ ರಾಜಕೀಯ ಸ್ವಾತಂತ್ರ್ಯದೊಡನೆ ಆರ್ಥಿಕ ಸ್ವಾತಂತ್ರ್ಯವನ್ನೂ ಕಳೆದುಕೊಳ್ಳುವ ಕಾಲ ಬಂದಿದೆಯೆಂದೂ ದಕ್ಷಿಣ ಕನ್ನಡ ಜಿಲ್ಲೆಯ ರೈತರೆಲ್ಲಾ ಬ್ರಿಟೀಷರ ವಿರೋಧವಾಗಿ ದಂಗೆ ಏಳಲು ಈಗಾಗಲೇ ತಯಾರಾಗಿ ನಿಂತಿದ್ದಾರೆಂದೂ ಮೊದಲು ಇಂಗ್ಲೀಷರನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಓಡಿಸಿ ನಂತರ ಮಡಿಕೇರಿ ಕೋಟೆಯನ್ನು ಮುತ್ತಿಗೆ ಹಾಕಿ ಬ್ರಿಟೀಷರನ್ನು ಓಡಿಸಿ ಪುನಃ ಕಾಶಿಗೆ ಹೋಗಿರುವ ಚಿಕ್ಕವೀರರಾಜರನ್ನು ಕೊಡಗಿಗೆ ಕರಸಿಕೊಂಡು ಕೊಡಗಿನ ರಾಜರನ್ನಾಗಿ ಮಾಡಬೇಕೆಂದೂ, ಆಗಾಗ್ಯೆ ರಾಜರಿಗೆ ಇಲ್ಲಿ ನಡೆಯುತ್ತಿರುವ ಆಗು ಹೋಗುಗಳನ್ನೂ ತಿಳಿಸುತ್ತಾ ಇರಬೇಕೆಂದೂ ಹೇಳಿದರು.

ಈ ವಿಷಯವನ್ನು ಪುಟ್ಟಬಸವರಾಜರು ಮತ್ತು ಇತರ ಸ್ನೇಹಿತರು ಕೇಳಿ ಸ್ವಲ್ಪ ಕಾಲ ಯೋಚಿಸಿ ರಾಮಗೌಡರ ಸಲಹೆಗೆ ಒಪ್ಪಿದರು. ರಾಮಗೌಡರು ಮತ್ತೂ ಮುಂದುವರಿದು ಪುಟ್ಟಬಸವರಾಜರು ತಮ್ಮ ಈಗಿರುವ ಹೆಸರನ್ನು ಬದಲಾಯಿಸಿ ಬೇರೊಂದು ಹೆಸರನ್ನು ಇಟ್ಟುಕೊಳ್ಳಬೇಕೆಂದೂ ಕಾರಣವೇನೆಂದರೆ ಜನರಿಗೆ ರಾಜ ಮನೆತನದವರೊಬ್ಬರ ಮುಖಾಂತರ ಈ ಸಂಗ್ರಾಮ ಕೈಕೊಂಡಿದೆ ಎಂಬ ವಿಷಯ ಮನವರಿಕೆಯಾದರೆ ಮಾತ್ರ ಜನರ ಬೆಂಬಲ ಸಿಗುವುದಕ್ಕೆ ಸಾಧ್ಯವೆಂದೂ ಹೇಳಿದರು. ಆಗ ಪುಟ್ಟಬಸವರಾಜರಿಗೂ ಮತ್ತು ಅಲ್ಲಿ ಕೂಡಿದ್ದ ಅವರ ಸ್ನೇಹಿತರಿಗೆ ಸ್ವಲ್ಪ ಯೋಚನೆಗೆ ಇಟ್ಟುಕೊಂಡಿತು. ಪುಟ್ಟಬಸವರಾಜರು ಸ್ವಲ್ಪ ಯೋಚಿಸಿ ಈ ಸಲಹೆಗೂ ಒಪ್ಪಿಕೊಂಡರು. ಈಗ ಯಾವ ಹೆಸರನ್ನು ಅವರಿಗೆ ಇಡುವುದೆಂಬ ಸಮಸ್ಯೆ ತಲೆದೋರಿ ಪುಟ್ಟಬಸವರಾಜರಿಗೆ ಬೇರೆ ಯಾವುದಾದರೂ ಹೆಸರಿದೆಯೋ ಎಂದು ಕೇಳಲಾಗಿ ಚಿಕ್ಕಂದಿನಲ್ಲಿ ಅವರ ಮಠದ ಬುದ್ಧಿಗಳು ಅವರನ್ನು ಕಲ್ಯಾಣಸ್ವಾಮಿ ಎಂದು ಕರೆಯುತ್ತಿದ್ದರೆಂದೂ ಆ ರೀತಿ ಹೆಸರಿಟ್ಟುಕೊಂಡರೆ ಸರಿಯಾಗಬಹುದೆಂದೂ ಸೂಚಿಸಿದರು ಎಲ್ಲ ಸ್ನೇಹಿತರು ಆ ಸಲಹೆಗೆ ಒಪ್ಪಿದರು. ಅಂದಿನಿಂದ ಪುಟ್ಟಬಸವರಾಜರನ್ನು "ಕಲ್ಯಾಣ ಸ್ವಾಮಿ" ಎಂದು ಕರೆದರು. ಕಲ್ಯಾಣ ಸ್ವಾಮಿಯೇ ಕೊಡಗು ಸಂಸ್ಥಾನದ ಕೊಡಗಿನ ರಾಜರು. ಕಾಶಿಗೆ ಹೋಗಿ ಹಿಂದಿರುಗಿ ಬರುವವರೆಗೆ ರಾಜ್ಯಪಾಲರಾಗಿ ರಾಜ್ಯದ ಉಸ್ತುವಾರಿ ನೋಡಿಕೊಳ್ಳುವವರೆಂದೂ ಕೊಡಗಿನ ಸಂಸ್ಥಾನದ ಜನರಿಗೆ ಬ್ರಿಟೀಷರ ಆಳ್ವಿಕೆ ಒಪ್ಪಿಗೆ ಇಲ್ಲವೆಂದೂ, ಬ್ರಿಟೀಷರೇ ಕೊಡಗಿನಲ್ಲಿ ಆಳಿದರೆ ಇಲ್ಲಿನ ಜನರೆಲ್ಲರೂ ಕ್ರೈಸ್ತರಾಗುವ ಸಂದರ್ಭ ಇದೆ ಎಂದು ಕಾಶಿಗೆ ಹೋದ ರಾಜರು ಆದಷ್ಟು ಬೇಗನೆ ಹಿಂತಿರುಗುವರೆಂದೂ, ಜನರಿಗೆ ಪ್ರಚಾರ ಮಾಡಬೇಕೆಂದು 1837ನೇ ಇಸವಿ ಏಪ್ರಿಲ್ 6ನೇ ತಾರೀಖು ಯುಗಾದಿಯ ದಿನ ಅಮರ ಸುಳ್ಯದಲ್ಲಿ ಯುದ್ಧ ಪ್ರಾರಂಭ ಮಾಡಬೇಕೆಂದು ಹಿಂದೆ ನಿಶ್ಚಯಿಸಿದ 8ದಿನಗಳ ಮೊದಲೇ ಪ್ರಾರಂಭಿಸಬೇಕೆಂದು ಈ ಹಿಂದೆ ಯೋಚಿಸಿದ್ದ ಮಾರ್ಚಿ 5ನೇ ತಾರೀಖು ಶಿವರಾತ್ರಿಯ ದಿನ ಮಡಿಕೇರಿ ಕೋಟೆಯನ್ನು ಮುತ್ತುವ ವಿಷಯವನ್ನು ಸವ್ಯಕ್ಕೆ ಈ ರೀತಿಯಾಗಿ ನಿಶ್ಚಯಿಸಿ ರಾಮಗೌಡರೂ, ಅಣ್ಣೆಗೌಡರೂ ಅವರೊಡನೆ ಮಾಚಯ್ಯನವರೂ ಮೊದಲು ಹೊರಟು ಸುಳ್ಯದಲ್ಲಿ ಮುಂದಿನ ಸಂಗ್ರಾಮಕ್ಕೆ ಎಲ್ಲಾ ಸಿದ್ಧತೆಗಳನ್ನು ಮಾಡುವಂತೆಯೂ ಕಲ್ಯಾಣಸ್ವಾಮಿ, ಹುಲಿಕುಂದ ನಂಜಯ್ಯ, ಶಾಂತಳ್ಳಿ ಮಲ್ಲಯ್ಯ, ಗುಡ್ಡೇರ ಅಪ್ಪಯ್ಯ, ಚೆಟ್ಟಿಕುಡಿಯ, ಕುರ್ತುಕುಡಿಯವರು ಕೊಡಗಿನ ಎಲ್ಲಾ ನಾಡುಗಳನ್ನು ಸುತ್ತಿ ಜನರಿಗೆ ತಮ್ಮ ಯೋಜನೆಯ ವಿಷಯ ತಿಳಿಸುವಂತೆಯೂ ಜನರು ಹಾಗೂ ಆಯುಧಗಳ ಶೇಖರಣೆಯಾಗಬೇಕೆಂದೂ ನಿಶ್ಚಯಿಸಿ ಪ್ರತಿಯೊಬ್ಬರಿಗೂ ಕುದುರೆಗಳನ್ನು ಒದಗಿಸಿ ಈ ಕೆಲಸಕ್ಕೆ ನಿಶ್ಚಯಿಸಿದರು. ಅಲ್ಲದೆ ಗುಡ್ಡೇರ ಅಪ್ಪಯ್ಯನವರು ಕಲ್ಯಾಣ ಸ್ವಾಮಿ ಮತ್ತು ಸಂಗಡಿಗರು ಅಮರ ಸುಳ್ಯಕ್ಕೆ ಹೋದ ಮೇಲೆ ಕೊಡಗಿನ ಸೈನ್ಯದ ಮತ್ತು ಆಯುಧಗಳ ಜಮಾವಣೆಯನ್ನು ನೋಡಿಕೊಳ್ಳಬೇಕೆಂದು ನಿಶ್ಚಯಿಸಲಾಯಿತು. ಅದೇ ರೀತಿ ಎರಡು ದಿನಗಳ ಪರ್ಯಂತ ಇವರೆಲ್ಲರೂ ಅವರವರ ಊರುಗಳನ್ನು ಸುತ್ತಿ ಜನರಿಗೆ ಬ್ರಿಟೀಷರ ವಿರುದ್ಧ ನಡೆಯಬೇಕಾದ ಯುದ್ಧದ ವಿಷಯ ಗುಟ್ಟು ಗುಟ್ಟಾಗಿ ಪ್ರಚಾರ ಮಾಡಿದರು. ಎರಡು ದಿನಗಳು ಕಳೆದ ನಂತರ ಗುಡ್ಡೇರ ಅಪ್ಪಯ್ಯನವರನ್ನು ಕೊಡಗಿನಲ್ಲಿ ಯುದ್ಧದ ಉಸ್ತುವಾರಿ ನೋಡಿಕೊಳ್ಳುವಂತೆ ಏರ್ಪಾಡು ಮಾಡಿ ಕಲ್ಯಾಣಸ್ವಾಮಿ ಹುಲಿಕುಂದ ನಂಜಯ್ಯ, ಸೋಮಯ್ಯ, ಕುಡಿಯ ಮತ್ತು ಕುರ್ತುಕುಡಿಯ ಕೊಡಲಿ ಪೇಟೆಗಾಗಿ ಬಿಸ್ಲೆ ಘಟ್ಟಕ್ಕಾಗಿ ಎರಡು ದಿನಗಳ ಪ್ರಯಾಣವನ್ನು ಕುದುರೆಗಳ ಮೇಲೆ ಮಾಡಿ ಸುಳ್ಯವನ್ನು ಸೇರಿದರು.

[ಮುಂದುವರಿಯುವುದು]

# ಬಚ್ಚನಾಯಕ

ಎನ್. ಎಸ್. ದೇವಿಪ್ರಸಾದ್,
ಸಂಪಾಜೆ

ಸಕಲೇಶಪುರದ ಹತ್ತಿರದ ಕಾಗಿನೆರಿ ಎಂಬಲ್ಲಿ ದೊಡ್ಡಣ್ಣಗೌಡನೆಂಬ ಪಾಳೆಯಗಾರನಿದ್ದನು. ಆತನ ಪತ್ನಿ ಚಿಕ್ಕಂತಾಯಿ. ಇವರಿಗೆ ನಾಲ್ಕು ಗಂಡು ಮಕ್ಕಳು. ಒಬ್ಬಾಕೆ ಹೆಣ್ಣು ಮಗಳು. ಬಚ್ಚಣ್ಣ, ಕರಿಯಣ್ಣ, ಮಂಜಣ್ಣ, ಬೈಸಣ್ಣ ಎಂದು ಅವರ ಹೆಸರುಗಳು. ಬಾಲ್ಯದಲ್ಲಿ ಬಚ್ಚಣ್ಣನ ಗೆಳತಿಯಾಗಿದ್ದ ನಾಗಿಯನ್ನು ಘಟ್ಟದ ಕೆಳಗಿನ ಏನೆಕಲ್ಲಿನ ಪಾಳೆಗಾರ ಬಾನಡ್ಕ ಸಬ್ಬಗೌಡನಿಗೆ ಮದುವೆ ಮಾಡಿಕೊಟ್ಟರುತ್ತಾರೆ.

ಬಚ್ಚನಾಯಕನಿಗೆ ಮದುವೆಯಾಗಿ ಮಕ್ಕಳಾದ ಮೇಲೆ ತಾನು ತುಳುನಾಡಿಗೆ ಹೋಗಬೇಕೆನ್ನುವ ಆಸೆ ಹುಟ್ಟಿಕೊಳ್ಳುತ್ತದೆ. ಆತನ ತಂದೆ, ತಾಯಿ "ತುಳುನಾಡು ಬಂಟ್ರನಾಡು—ತುಂಟ್ರಸೀಮೆ, ಭೂತ ಆಳುವಂತ ರಾಜ್ಯ. ಅಲ್ಲಿಗೆ ಹೋಗಬೇಡ"ವೆಂದು ತಡೆಯುತ್ತಾರೆ. ತಡೆ ಮಾತನ್ನು ಧಿಕ್ಕರಿಸಿ, ಆರು ತಿಂಗಳಿಗಾಗುವ ರೊಟ್ಟಿ, ಮೂರು ತಿಂಗಳಿಗಾಗುವ ಮೇಲೊಗ್ರವನ್ನು ಬುತ್ತಿ ಕಟ್ಟಿಕೊಂಡು ಬಿಳಿ ಕುದುರೆಯನ್ನೇರಿ ಹೊರಡುತ್ತಾನೆ. ಆಗ ಆತನ ಹೆಂಡತಿ ಅಡ್ಡ ನಿಂತು "ಕಡಿಕೆ ತುಂಬ ಭತ್ತ ಇದೆ, ಪೆಟ್ಟಿಗೆ ತುಂಬ ಹಣ ಇದೆ, ಹಟ್ಟಿ ತುಂಬ ದನ, ಕರುಗಳು ಇವೆ. ಹೆತ್ತ ತಾಯಿ-ತಂದೆ ಹೆಂಡತಿ ಮಕ್ಕಳನ್ನು ಎಲ್ಲಾ ತೊರೆದು ಹೋಗುತ್ತಾ ಇರೋದು ಸರಿಯಲ್ಲ" ಎಂದು ಹೇಳುತ್ತಾ ಅಡ್ಡ ನಿಲ್ಲುತ್ತಾಳೆ. ಆಕೆಯ ಎದೆಗೆ ಕೈ ಹಾಕಿ ತಳ್ಳಿದಾಗ, ಆಕೆ ಹದಿನಾರು ಮೆಟ್ಟಲು ಉರುಳಿ ಮುಖ ಕೆಳಗಾಗಿ ಬೀಳುತ್ತಾಳೆ. ಬಿದ್ದಲ್ಲಿಂದ ಏಳುತ್ತಾಳೆ. "ಕಾಲು ತೆಗೆದುಕೊಂಡು ಹೋದ ಗಂಡಸು ತಲೆ ತೆಗೆದುಕೊಂಡು ಬರಬಾರದು." ಎಂದು ಹೇಳಿ ಮೂರು ಬಾರಿ ನೆಲಕ್ಕೆ ಕೈ ಹೊಡೆದು ಶಾಪ ಹಾಕುತ್ತಾಳೆ.

ಅದನ್ನು ಗಣನೆಗೆ ತೆಗೆದುಕೊಳ್ಳದೆ ಕುದುರೆಯನ್ನು ಏರಿ ಹೊರಟ ಬಚ್ಚಣ್ಣ ಮಧ್ಯಾಹ್ನದ ಹೊತ್ತಿಗೆ, ಕಿನ್ನರಿ ಘಟ್ಟ ಇಳಿದು ಕಿನ್ನರಿ ಹೊಳೆ [ಕನ್ನಡಿ ಹೊಳೆ] ಯಲ್ಲಿ ಮಿಂದು ಊಟ ಮಾಡುವಾಗ ಕೈಯಲ್ಲಿ ಎತ್ತಿಕೊಂಡ ಅನ್ನದಲ್ಲಿ ಕಸ, ಬಾಯಿಗಿಟ್ಟದ್ದರಲ್ಲಿ ಕಲ್ಲು ಸಿಗುತ್ತದೆ. ಕಾಗೆ ಬಿಚ್ಚಿಟ್ಟ ಬುತ್ತಿಯನ್ನು ಎಂಜಲು ಮಾಡುತ್ತದೆ. ಅಪಶಕುನದ ಬಗ್ಗೆ ದುಃಖಿಸುತ್ತಾ ಬುತ್ತಿಯನ್ನು ಕಿನ್ನರಿ ಹೊಳೆಗೆ ಎಸೆಯುತ್ತಾನೆ. ಅಲ್ಲಿಯೇ ಪಕ್ಕದಲ್ಲಿ ಕೋಟೆಯೊಂದು ಕಾಣಸಿಗುತ್ತದೆ. ಅದರಲ್ಲಿ ನಾಲ್ವರು ಪುರುಷ ಸಹೋದರರಲ್ಲಿ ಒಬ್ಬರಾದ ಕುಮಾರಸ್ವಾಮಿ ನೆಲೆಸಿರುವುದು ತಿಳಿದು ಭೇಟಿಯಾಡಲು ಹೋಗುತ್ತಾನೆ. ಕುಮಾರಸ್ವಾಮಿ ನೆಲೆಸಿದ್ದರಿಂದ ಕುಮಾರಪರ್ವತವೆಂಬ ಹೆಸರು ಬರಲು ಕಾರಣವಾಯಿತೆಂದು ಐತಿಹ್ಯ ಇದೆ.

ನಾಥ ಪಂಥದ ಅನುಯಾಯಿಗಳಾದ ಪುರುಷ ಸಹೋದರರು ಗೌಡ ಜನಾಂಗದವರು ಜೈನರಾಗುವುದನ್ನು ತಡೆದರೆಂದು ತಿಳಿದುಬರುತ್ತದೆ. ಕುಮಾರಸ್ವಾಮಿ ಕೋಟೆಯೊಳಗೆ ಕತ್ತಿವರಸೆ, ಕುದುರೆ ಸವಾರಿ, ಬಿಲ್ಲುವಿದ್ಯೆ, ಮಲ್ಲವಿದ್ಯೆ, ಅಲ್ಲದೆ ಕೋವಿಯಲ್ಲೂ ತರಬೇತು ನೀಡುತ್ತಿದ್ದರು. ಬಚ್ಚನಾಯಕನು ಎಲ್ಲಾ ವಿದ್ಯೆಯಲ್ಲಿ ಯಶಸ್ವಿಯಾಗಿ ಕುಮಾರಸ್ವಾಮಿಯ ಮೆಚ್ಚುಗೆಗಳಿಸುತ್ತಾನೆ. ವೈದಿಕ ಸಂಪ್ರದಾಯವನ್ನು ಪರಿಹಾಸ್ಯ ಮಾಡುವ ನಾಥ ಪಂಥದ ಪ್ರಚಾರಕ್ಕಾಗಿ ತಯಾರಾದ "ಸಿದ್ಧವೇಷ" ಎಂಬ ಪುರುಷರ ಮಕ್ಕಳ ತಂಡ ಕಟ್ಟಿಕೊಂಡು ಮನೆ ಮನೆ ತಿರುಗಾಡುತ್ತಾ ಹೋಗುತ್ತಾರೆ.

ಹೀಗೆ ತಿರುಗಾಡುತ್ತಾ ಹೋದಾಗ ಬಚ್ಚನಾಯಕನಿಗೆ ನಾಗಿಯ ಭೇಟಿಯಾಗುತ್ತದೆ. ಆಕೆಗೆ ಮಕ್ಕಳಿಲ್ಲದ ವಿಚಾರ ತಿಳಿದಾಗ ಆತ ನೀಡಿದ ಸಿದ್ಧೌಷಧದಿಂದ ಆಕೆ ಬಸುರಾಗುತ್ತಾಳೆ. ಇದರಿಂದ ಊರವರಿಗೆ ಅನುಮಾನ ಹುಟ್ಟುತ್ತದೆ. ಊರ ಮುಖಂಡರು—ಆಕೆ ಕುದಿಯುವ ಎಣ್ಣೆಯಲ್ಲಿ ಕೈ ಹಾಕಿ ತನ್ನ ಹೊಟ್ಟೆಯಲ್ಲಿರುವ ಮಗು ಸುಬ್ಬಗೌಡರದೆಂದು ಪ್ರಮಾಣ ಮಾಡಬೇಕೆಂದು ಶಿಕ್ಷೆ ವಿಧಿಸುತ್ತಾರೆ. ಈ ವಿಚಾರವನ್ನು ತಿಳಿದು ನಾಗಿ ವಿಷ ಸೇವಿಸುತ್ತಾಳೆ. ಬಚ್ಚನಾಯಕನಲ್ಲಿ ತನ್ನ ಮಗುವಿಗೆ ವಿಷ ತಲುಪುವ ಮೊದಲೇ ತನ್ನ ಹೊಟ್ಟೆಯನ್ನು ಸೀಳಿ ಮಗುವನ್ನು ಉಳಿಸಲು ಹೇಳುತ್ತಾಳೆ. ಹೀಗೆ ಆಕೆಯ ಹೊಟ್ಟೆಯಿಂದ ತೆಗೆದ ಮಗುವನ್ನು ಬಚ್ಚನಾಯಕನು ಮುದ್ದಾಡುತ್ತಿರುವಾಗ ಸುಬ್ಬಗೌಡ ಬಂದು ತನ್ನ ಸೈನಿಕರಿಂದ ಬಾದಡ್ಕಮಕ್ಕಿ ಗುಂಡಿ ಎಂಬಲ್ಲಿ ಆತನನ್ನು ಹಿಡಿಸಿ ಕೊಂದುಹಾಕುತ್ತಾರೆ.

**ಆಧಾರ :** ಬಚ್ಚನಾಯಕ ಪಾಡ್ದನ-ಸರ್ವಶ್ರೀ ಶಂಕರ ಅಜಲ, ಕೇಪು ಅಜಲ, ಬೊಳಿಯ ಅಜಲ, ಕದ್ರಿ ಕ್ಷೇತ್ರ ಚರಿತ್ರೆ, ಸುಬ್ರಹ್ಮಣ್ಯ ಕ್ಷೇತ್ರ ಚರಿತ್ರೆ, ಶಿರಾಡಿ ಭೂತ ಪಾಡ್ದನ, ಪುರುಷ ಭೂತ ಪಾಡ್ದನ.

## ನಗೆ ಹನಿ

ವಕೀಲ ಇದನ್ನು ವಿಸ್ತರಿಸಿ
ವ—ವಂಚನೆಯಿಂದ
ಕೀ—ಕೀಟಲೆಮಾಡಿ
ಲ—ಲಂಚ ಪಡೆಯುವವನೆ ವಕೀಲ.

● ಚಂಡಿರ ಕಿಸು ಗಣಪತಿ

# ಗಂಗರಸರ ರಾಜಧಾನಿ ತಲಕಾಡು

[ಹಿಂದಿನ ಸಂಚಿಕೆಯಿಂದ]

**ಮಂ**ಡ್ಯ ಜಿಲ್ಲೆಯಲ್ಲಿ ಕಿಕ್ಕೇರಿ, ಅರ ಕೆರೆ ಕೊಪ್ಪಲು, ನಾಗಮಂಗಲ, ಕಿಲಾರ, ಕೆರೆಗೋಡು ಮುಂತಾದ ಅನೇಕ ಗ್ರಾಮ ಗಳಲ್ಲಿ ಗಂಗರ ವಂಶಸ್ತರು ಇರುವುದು

**ಟಿ. ಆರ್. ಮುದ್ದೇಗೌಡ,** ಮೈಸೂರು

ಕೆಲವು ಶಾಸನಗಳಿಂದ ತಿಳಿಯಲ್ಪಡುತ್ತದೆ. ಬೆಂಗಳೂರು ಜಿಲ್ಲೆಯಲ್ಲಿ ಆನೇಕಲ್, ಮಳೂರು, ಕನಕಪುರ, ಬಿಡದಿ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

### ತುಮಕೂರು

ಕುಣಿಗಲ್, ಗುನ್ನಾಗರೆ, ಗೊಳೂರು, ಕೈದಾಳ್, ಹುತ್ತರಿದುರ್ಗ, ಹುಲಿಯೂರು ದುರ್ಗ, ಮಾಗಡಿ ಮುಂತಾದ ಗ್ರಾಮಗಳಲ್ಲಿ ಶಾಸನದ ರೀತ್ಯಾ ಕಂಡುಬರುತ್ತಾರೆ.

### ಕೊಡಗು (ದಕ್ಷಿಣ ಕನ್ನಡ)

ಈ ಜಿಲ್ಲೆಗಳಲ್ಲಿ ಆಯಾಯ ಪ್ರದೇಶಕ್ಕೆ ತಕ್ಕಂತೆ ಗೌಡ ಜನಾಂಗವೆಂದು, ಆದರೆ ಮೂಲತಃ ಇವರು ಕೊಂಗಣ ವರ್ಮನ ಸಂತತಿ ಆದ್ದರಿಂದ ಕೊಂಗಾಳ್ವರು, ಆಳಪರು, (ಈಗಿನ ಆಳ್ವ ಅಥವಾ ಭಂಟರು) ಎಂದು ಕರೆಯಲ್ಪಡುತ್ತಾರೆ. ಆದರೆ, ಎಲ್ಲರೂ ಒಕ್ಕಲಿಗ ಜನಸ್ತೋಮದ ವಿವಿಧ ಒಳ ಪಂಗಡಗಳಾಗಿ ಚಿದ್ರಹೊಂದಿದ ಒಳ ಬಣಗಳಾಗಿ ಉಳಿದಿದ್ದಾರೆ.

ತಲಕಾಡು ಗಂಗರು ಸುಮಾರು 9 ಶತಮಾನಗಳ ಕಾಲ ಕನ್ನಡನಾಡಿನ ದಕ್ಷಿಣ ಭಾಗವನ್ನು ಆಳಿದರು. ಈ ರಾಜ್ಯಕ್ಕೆ ಗಂಗವಾಡಿ ತೊಂಭತ್ತಾರು ಸಾವಿರ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ. ಕೊಡಗು ಜಿಲ್ಲೆಯಿಂದ ಉತ್ತರ ಆರ್ಕಾಟ್, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಯಿಂದ ಸೇಲಂ, ಮತ್ತು ಕೊಯಮತ್ತೂರು ಜಿಲ್ಲೆಯವರೆಗೆ, ಪ್ರಾರಂಭದಲ್ಲಿ ಕೋಲಾರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಇವರು ನಂತರ ತಲಕಾಡನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಕೆಲ ಕಾಲದ ನಂತರ ಚೆನ್ನಪಟ್ಟಣದ ಮಳೂರು [ಹಿಂದಿನ ಮುಕುಂದಪಟ್ಟಣ] ಬೆಂಗಳೂರು ಜಿಲ್ಲೆಯ ಮಾಣಿ [ಮಾಣಿಕ್ಯಪುರ] ಕೆಲ ಕಾಲ ಸ್ಥಳಾಂತರಿಸಿದ್ದರು. ಇವರ ವಂಶಸ್ತರು ಕೊನಾರ್ಕನ್ ಸೂರ್ಯ ದೇವಾಲಯ ಹಾಗೂ ಒರಿಸ್ಸಾದ ಪೂರಿ ಜಗನ್ನಾಥ ಮಂದಿರವನ್ನು ನಿರ್ಮಿಸಿ ಈಗಲೂ ಗಂಗವಂಶಸ್ತರ ರಾಜನು ರಥ ಯಾತ್ರೆಯ ದಿನದಂದು ಪೂಜಾ ಕೈಂಕರ್ಯ ದಲ್ಲಿ ಭಾಗವಹಿಸುತ್ತಿರುವುದು ಎಲ್ಲರಿಗೂ ತಿಳಿದ ಜೀವಂತ ನಿದರ್ಶನವಾಗಿದೆ. ಈ ಜನಾಂಗದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಭಾರತೀಯ [ಪುರಾತತ್ವ] ಸರ್ವೇಕ್ಷಣದಲ್ಲಿ ಮೈಸೂರು ಜಿಲ್ಲೆ ವರಿಷ್ಟ ಶಾಸನ ತಜ್ಞರಾದ ಡಾ|| ಎನ್. ಎಸ್. ಸ್ವಾಮಿಯವರ ಅಪ್ರಕಟಿತ [ಅಚ್ಚಿಗೆ ಸಿದ್ಧವಿರುವ] "ಒಕ್ಕಲಿಗ ಜನಾಂಗ ಒಂದು ಸಾಂಸ್ಕೃತಿಕ ಅಧ್ಯಯನ" ವೆಂಬ ಗ್ರಂಥವನ್ನು ನೋಡಬಹುದು. ಒಕ್ಕಲಿಗರ ಜನಾಂಗದ ಒಳ ಪಂಗಡಗಳಾದ ಅನೇಕ ರಾಜ ವಂಶಸ್ತರ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಿ ಈ ಬಗ್ಗೆ ಅನೇಕರು ತಿಳಿಯದೆ ಮೂಲೆ ಗುಂಪಾಗಿರುವ ಒಳ ಪಂಗಡಗಳ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿ ಒಳಪಂಗಡಗಳ ಮತಭಾಂದವರನ್ನು ಒಂದೇ ಜನಾಂಗದ ಧ್ವಜಸ್ತಂಭದ ಕೆಳಗೆ ಬರುವಂತೆ ಹೆಚ್ಚಿನ ಆಸಕ್ತಿಯನ್ನು ವಹಿಸಿ ಕಾರ್ಯೋನ್ಮುಖರಾಗಿರುವ ಪರಮಪೂಜ್ಯ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಅಡಿದಾವರೆಗಳಲ್ಲಿ ಮೇಲ್ಕಂಡ ವರದಿಯನ್ನು ಮಂಡಿಸುತ್ತಿದ್ದೇವೆ.

## ತಲಕಾಡಿನ ಗಂಗರ ಇತಿಹಾಸ

### ತಲಕಾಡಿನ ಗಂಗರೇ ವೆಳ್ಳಾಳ– ಬೆಳ್ಳಾಳರು

ತಲಕಾಡು ಗಂಗವಂಶ ಸ್ಥಾಪಕರು ಕೊಂಕಣಿವರ್ಮ [ಧಡಿಗಾ ಮತ್ತು ಮಾಧವ] ಇವರುಗಳ ಈಗಿನ ಕೊಯಮತ್ತೂರು ಜಿಲ್ಲೆಯ ಗಂಗೆ ಪೊರಾರಿನಿಂದ ಬಂದವರೆಂದೂ ಅವರುಗಳು ಜೈನ ಆಚಾರ್ಯ "ಸಿಂಹನಂದಿ"ಯ ದರ್ಶನ ಮಾಡಿ ಆಚಾರ್ಯರ ಅನುಗ್ರಹದಿಂದ ರಾಜ್ಯ ಸ್ಥಾಪನೆ ಮಾಡಿದರೆಂದೂ ಆ ರಾಜ್ಯಕ್ಕೆ ಗಂಗವಾಡಿ 9600 ಎಂತಲೂ ಡಾ|| ಲೂಯಿರೈಸ್‌ರವರು ಮತ್ತು ಡಾ|| ಜಾನ್ ಪ್ಲೀಟರ್‌ರವರು ಚರ್ಚೆ ಮಾಡಿ ಶಿಲಾಶಾಸನಗಳ, ತಾಮ್ರ ಶಾಸನಗಳ ಆಧಾರದ ಮೇಲೆ ತಲಕಾಡು ಗಂಗವಂಶದ ಮೂಲಸ್ಥಾಪಕರು ಕೊಂಕಣೀವರ್ಮನೆಂದು [ದಡಿಗಾ ಮಾಧವರು] ಒಪ್ಪಿಕೊಂಡಿರುತ್ತಾರೆ. ಅಲ್ಲದೆ ಪ್ರೊ|| ಪಿ. ಬಿ. ದೇಸಾಯಿ, ಪ್ರೊ|| ಎಂ. ವಿ. ಕೃಷ್ಣರಾವ್ ಮತ್ತು ಕೆಲವು ವಿದ್ವಾಂಸರುಗಳು ಸಹ ಮೇಲ್ಕಂಡವರುಗಳ ಅಭಿಪ್ರಾಯವನ್ನು ಪುಷ್ಠೀಕರಿಸುತ್ತಾರೆ. ಕರ್ನಾಟಕ ಸರ್ಕಾರವು ಹೊರಡಿಸಿರುವ "ಕರ್ನಾಟಕ ಪರಂಪರೆಯು" ಗ್ರಂಥದಲ್ಲಿಯೂ ಮೇಲ್ಕಂಡ ಅಂಶಗಳನ್ನು ಪುಷ್ಠೀಕರಿಸುತ್ತಾರೆ. ಮತ್ತೆ ಕೆಲವು ವಿದ್ವಾಂಸರುಗಳು "ದಕ್ಷಿಣ ಭಾರತದ ಇತಿಹಾಸ" ರಾಜಕೀಯದ ಬಗ್ಗೆಯೂ ಸಹ ಗ್ರಂಥಗಳನ್ನು ರಚಿಸಿದ್ದಾರೆ.

[ಮುಂದುವರಿಯುವುದು]

## ಇದು ಏನಿರಬಹುದು ? ತಿಳಿಯಿರಿ

**ಕೆ**ರಿಯ ಒಬ್ಬ ಮಿಡಲ್ ಸ್ಕೂಲ್ ವಿದ್ಯಾರ್ಥಿ. ಸಹಪಾಠಿಗಳೊಂದಿಗೆ ಚೆನ್ನಾಗಿ ಹೊಂದಿಕೊಂಡು ಆಟವಾಡಿ ನಲಿಯುತ್ತಿದ್ದ ಅವನ ತಾಯಿ ಜೋಮಿ ಮಗನ ಬಗ್ಗೆ ಬಹಳ ಕಾಳಜಿಯನ್ನು ವಹಿಸುತ್ತಿದ್ದಳು. ಅವಳು ಮಗನ ತೊಡೆಯ ಮೇಲೆ, ಕಾಲಿನ ಹಿಮ್ಮಡಿಯ ಮೇಲೆ ನಸುಗೆಂಪಿನ ಮಚ್ಚೆಗಳನ್ನು ಗಮನಿಸಿದಳು. ಆ ಮಚ್ಚೆಗಳನ್ನು ಒತ್ತಿದರೂ ಅದರ ಪರಿವೆಯೇ ಅವನಿಗಿರಲಿಲ್ಲ. ತಡ ಮಾಡದೆ ಚರ್ಮ ವೈದ್ಯರನ್ನು ಕಾಣಲು ಹೋದಳು.

ಸಂಗ್ರಹ : **ಅಪ್ಪೆಯಂಡ್ರ**
**ಎ. ಜಾಸ್ಮಿನ್,** ಮರಗೋಡು

ಮಾಯಮ್ಮ ಪ್ರತಿದಿನ ಕೂಲಿ ಮಾಡಿ ಜೀವನ ಹೊರೆಯುವ ಕಷ್ಟ ಜೀವಿ. ಇವಳ ಮಗಳು ತಾಯಿಗೆ ಅಡಿಗೆ ಮನೆಕೆಲಸದಲ್ಲಿ ಸಹಾಯ ಮಾಡುತ್ತಿದ್ದಳು. ತಾಯಿ ಬಿಸಿ ಪಾತ್ರೆಗಳನ್ನು ಒಲೆಯಿಂದಿಳಿಸುವಾಗ ಬಟ್ಟೆಯನ್ನಾಗಲೀ, ಇಕ್ಕಳವನ್ನಾಗಲೀ ಬಳಸುತ್ತಿರಲಿಲ್ಲ. ಬಿಸಿಗೆ ಯಾವ ಪ್ರತಿಕ್ರಿಯೆಯೂ ಇಲ್ಲದೆ ಸಲೀಸಾಗಿ ಒಲೆಯ ಮೇಲಿಂದ ಪಾತ್ರೆಗಳನ್ನು ಇಳಿಸುತ್ತಿದ್ದುದನ್ನು ನೋಡಿ ಮಗಳಿಗೆ ಇದೊಂದು ಆಶ್ಚರ್ಯದ ಸಂಗತಿಯಾಗಿತ್ತು. ಒಂದು ಸಲ ಬಿಸಿಸಾರು ಕಾಲಿನ ಮೇಲೆ ಬಿದ್ದಾಗಲೂ ಅವಳು ಉರಿ ನೋವು ಎಂದು ಬಡಬಡಿಸಲಿಲ್ಲ. ಮಗಳು ತಾಯಿಯನ್ನು ಆಸ್ಪತ್ರೆಗೆ ಚಿಕಿತ್ಸೆಗೆ ಕರೆದುಕೊಂಡು ಹೋದಳು.

ಮುರುಗಪ್ಪ ಸಂತೆಗೆ ಹೋಗಿ ಕಾಳುಗಳನ್ನು ಮಾರುವವ. ಅವನ ಆರೋಗ್ಯದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದಿದ್ದರೂ ಇತ್ತೀಚೆಗೆ ಮೈ ಕೈ ಬೆಂಡಾಗುತ್ತಿತ್ತು. ಮುಖದ ಚರ್ಮ ದಪ್ಪವಾಗಿ ಎಣ್ಣೆಯಿಂದ ಹೊಳೆಯುತ್ತಿತ್ತು. ಕಿವಿಯ ಹಾಲೆ ದಪ್ಪವಾಗುತ್ತಿತ್ತು. ಮೂಗಿನ ಕಂಬ ಸ್ವಲ್ಪ ಕುಗ್ಗುತ್ತಾ ಬಂತು. ಇದನ್ನು ಗಮನಿಸಿದ ಆರೋಗ್ಯ ಕಾರ್ಯಕರ್ತರು ಮುರಗಪ್ಪನನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಕರೆದುಕೊಂಡು ಹೋದರು.

ಕುಕ್ಕಪ್ಪ ತನ್ನ ಯಾವ ತೊಂದರೆಗೂ ವೈದ್ಯರನ್ನಾಗಲೀ ಆರೋಗ್ಯ ಕಾರ್ಯಕರ್ತರನ್ನಾಗಲೀ ಕಾಣುವವನಲ್ಲ. ಅವನಿಗೆ ಅನೇಕ ವರ್ಷಗಳಿಂದ ಮೈಮೇಲೆ ಮಚ್ಚೆಗಳಿವೆ. ಶರೀರ ಬೆಂಡಾದ ಹಾಗೆ ಅನಿಸುತ್ತದೆ. ಇತ್ತೀಚೆಗೆ ಅವನ ಕೈ ಬೆರಳು ಬಾಗಿ ಬಗ್ಗಿಸಲಾರದೆ ನಿಂತಿವೆ. ಅವನ ಕೈಯಲ್ಲಿ ಈಗ ಏನೂ ಹಿಡಿಯಲು ಆಗುವುದಿಲ್ಲ.

ಮೇಲೆ ಹೇಳಿದ ಮೂರು ಪ್ರಕರಣಗಳೂ ಕುಷ್ಠರೋಗದ ಪ್ರಾರಂಭಿಕ ಲಕ್ಷಣಗಳು. ನಾಲ್ಕನೇಯದು ಮಾತ್ರ ಕುಷ್ಠರೋಗದ ಕೊನೆಯ ಹಂತ.

ಕುಷ್ಠರೋಗಕ್ಕೆ ಹೆದರಬೇಕಾಗಿಲ್ಲ. ಅದನ್ನು ಪತ್ತೆ ಹಚ್ಚಿ ಪ್ರಾರಂಭದಲ್ಲಿಯೇ ಚಿಕಿತ್ಸೆಕೊಟ್ಟರೆ ನೂರಕ್ಕೆ ನೂರು ಭಾಗ ಗುಣಪಡಿಸಬಹುದು. ಇದು ದೇವರ ಶಾಪವೂ ಅಲ್ಲ. ಒಂದು ಕಳಂಕವೂ ಅಲ್ಲ. ಪ್ರಾಥಮಿಕ ಹಂತದಲ್ಲೇ ಪತ್ತೆ ಹಚ್ಚುವುದು ಬಹಳ ಮುಖ್ಯ. ಕುಷ್ಠರೋಗದಲ್ಲಿ ಬರುವ ಅಂಗವಿಕಲತೆ ಕೊನೆಯ ಹಂತ. ಪ್ರಾರಂಭದಲ್ಲಿ ಚಿಕಿತ್ಸೆಕೊಟ್ಟರೆ ಅಂಗವಿಕಲತೆಯನ್ನು ಯಶಸ್ವಿಯಾಗಿ ತಡೆಗಟ್ಟಬಹುದು. ಇನ್ನು ಹೆಚ್ಚಿನ ವಿವರಗಳಿಗೆ ಕುಷ್ಠರೋಗದ ಆಸ್ಪತ್ರೆಯನ್ನು ಸಂಪರ್ಕಿಸಿ.

## ನಗೆ ಹನಿಗಳು

ಶಾಲೆಯಲ್ಲಿ ಮೇಷ್ಟ್ರು ಕೆಂಚನನ್ನು ಈ ರೀತಿ ಪ್ರಶ್ನೆ ಕೇಳಿದರು.

ಮೇಷ್ಟ್ರು – ಚಂದ್ರಲೋಕ ದೂರವೋ ಅಮೇರಿಕ ದೂರವೋ

ಕೆಂಚ – ಅಮೇರಿಕ ದೂರ ಸಾರ್

ಮೇಷ್ಟ್ರು – ಹೇಗೋ ?

ಕೆಂಚ – ಚಂದ್ರ ದಿನನಿತ್ಯ ನಿಂತು ಆಕಾಶದಲ್ಲಿ ನೋಡಿದರೆ ಕಾಣುತ್ತದೆ. ಆದರೆ ಅಮೇರಿಕಾ ನಿಂತು ನೋಡಿದರೆ ಕಾಣುವುದೇ ಇಲ್ಲಾ ಸಾರ್.

ಮೇಷ್ಟ್ರು – ತೂ, ಪೆದ್ದ ಹತ್ತೋ ಬೆಂಚಿನ ಮೇಲೆ !

ಕೆಂಚ – ಬೆಂಚು ಮೇಲೆ ಹತ್ತಿ ನೋಡಿದರೂ ಕಾಣುವುದಿಲ್ಲ ಸಾರ್ ಎಂದ.

○ ○ ○

ಡಾಕ್ಟರ್ – ಆಪರೇಷನ್ ಸಕ್ಸಸಾ ಸಿಸ್ಟರ್

ಸಿಸ್ಟರ್ – ಸೆಕ್ಸಸ್ ಸಾರ್, ಆದರೆ ಕತ್ರಿ ಮಾತ್ರ ಪೇಶೆಂಟ್‌ನ ಹೊಟ್ಟೆಯೊಳಗೆ ಸಾರ್.

ಡಾಕ್ಟರ್ – ಪರ್ವಾಗಿಲ್ಲ, ಬಿಲ್ಲ್ ಬರೆಯುವಾಗ ಹೊಟ್ಟೆಯೊಳಗಿರುವ ಕತ್ರಿಯ ಬಿಲ್ಲು ಸೇರಿಸಿ ಬರೆದರಾಯಿತು. ಅಷ್ಟೇ.

● **ಚಂಡೀರ ರವಿಗಣಪತಿ,** ಮರಂದೊಡ

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

**ಹಾ**ಲನ್ನು ಸ್ವೀಕರಿಸಿ ಕುಡಿದ ನಂತರ ಆ ಗ್ಲಾಸಿಗೆ ಹಣ ಮತ್ತು ಎಲೆ ಅಡಿಕೆಯನ್ನು ಹಾಕಿ ಹಿಂತಿರುಗಿಸಿ ಅತ್ತೆಯ ಪಾದಕ್ಕೆ ನಮಸ್ಕಾರ ಮಾಡುವುದು. ಅತ್ತೆಯಾದವರು ಗ್ಲಾಸಿನಲ್ಲಿದ್ದ ಹಣವನ್ನು ಮದುಮಣ್ಣನ ಮುಸುಕಿನ ವಸ್ತ್ರಕ್ಕೆ ಕಟ್ಟಿ ಆಶೀರ್ವಾದ ಮಾಡುವರು. [ಹಣವನ್ನು ಗ್ಲಾಸಿಗೆ ಕಾಣಿಕೆಯಾಗಿ ಹಾಕುವುದು. ಧಾರಾಮುಹೂರ್ತವಾಗುವವರೆಗೆ ವರನು ವಧುವಿನ ಮನೆಯ ಹಂಗಿನವನಾಗಿರಬಾರದು ಎಂದು]

### ಸಾಣೆಕಲ್ಲು ಗಂಧದ ಕೊರಡು :

ಸಾಣೆಕಲ್ಲು ಗಂಧದ ಕೊರಡನ್ನು ದಿಬ್ಬಣದ ಕಡೆಯುವರಿಗೆ ವಧುವಿನ ಕಡೆಯುವರು ಕೊಡುವರು. ಹಾಗೆ ಕೊಡುವಾಗ ಹತ್ತು ಕಿಲೋ ಸಾಣೆಕಲ್ಲು, ಇಪ್ಪತ್ತು ಕಿಲೋ ಗಂಧದ ಕೊರಡನ್ನು ಎತ್ತಿಕೊಡುವಂತೇವೆ ಎಂದು ಪದ್ಧತಿಯಾಗಿ ಹೇಳಿ ಕೊಡುವರು.

### ವೀಳ್ಯ ಕೊಡುವುದು :

ದಿಬ್ಬಣದ ಕಡೆಯ ಮುಖ್ಯಸ್ಥರು ವಧುವಿನ ಕಡೆಯ ಮುಖ್ಯಸ್ಥರಿಗೆ, ನೆಂಟರಿಗೆ, ನೀರು ಚಾಪೆ ತಂದವರಿಗೆ, ಊರ ಅಣ್ಣಂದಿರಿಗೆ, ಸೋದರ ಮಾವನಿಗೆ, ಒಕ್ಕಲೆಜಮಾನರಿಗೆ, ಗಂಧದ ಕೊರಡು ಸಾಣೆಕಲ್ಲು ತಂದವರಿಗೆ, ಅದೇ ರೀತಿ ಪರಸ್ಪರ ಹೆಂಗಸರ ಕಡೆಯವರಿಗೂ ವೀಳ್ಯ ಕೊಡುವುದು.

### ಬಣ್ಣ ಬಂಗಾರ ತೆಗೆದುಕೊಂಡು ಹೋಗುವುದು :

ನೆಂಟರು ಹಿಂತಿರುಗಿದೊಡನೆ ದಿಬ್ಬಣದ ಮುಖ್ಯಸ್ಥರು ಕೋಟು, ಪಂಚೆ, ಬಿಳಿ ಪರಟು ಹಾಕಿ ತಲೆಗೆ ಪೇಟ ಕಟ್ಟಿ ಕೊಡೆ ಕೋಲಾಗಿ ಸೀತಾವಳಿ ಚಪ್ಪರದ ಮುಂದೆ ಬಂದು ಉಳಿದ ನಾಲ್ಕು ಗ್ರಹಸ್ಥರು ಜೊತೆಯಾಗಿ ಹಿಂದಿನಿಂದ ಬಣ್ಣ ಬಂಗಾರದ ಪೆಟ್ಟಿಗೆಯ ಸಹಿತ ಮೂರು ಅಥವಾ ಐದ ಮುತ್ತೈದೆಯರು ಅವರ ಹಿಂದಿನಿಂದಲೂ, ಒಂದು ಮಣ್ಣಿನ ದೀಪ ಸಮೇತ ತೆಂಗಿನೆಣ್ಣೆ, ಚೊಂಬು, ಮದುಮಗಳ ಶೃಂಗಾರಕ್ಕೆ ಬೇಕಾದ ವಸ್ತುಗಳೊಂದಿಗೆ ಈ ಹೇಳದ ಎಲ್ಲರೂ ಚಪ್ಪರದ ಬಾಳೆ ಕಟ್ಟಿದ ಮುಂಬಾಗಿಲಿಗೆ ಬಂದು ನಿಲ್ಲುವುದು. ಅದೇ ಸಮಯಕ್ಕೆ ಸರಿಯಾಗಿ ಚೌಕಿಯಲ್ಲಿ ವಧುವಿನ ಕಡೆಯ ಊರು ಗೌಡರು/ ಮುಖ್ಯಸ್ಥರು, ನೆಂಟರಿಷ್ಟರು, ಗ್ರಹಸ್ಥರು ಕುಳಿತಿದ್ದು, ವರನ ಕಡೆಯಿಂದ ಬಣ್ಣ ಬಂಗಾರ ತರುವ ನೆಂಟರನ್ನು ಗಮನಿಸುವರು. ಆಗ ವರನ ಭಾಗದ ದಿಬ್ಬಣದ ಮುಖ್ಯಸ್ಥರು ಅವರ ಜಿಲ್ಲೆ, ತಾಲ್ಲೂಕು, ನಾಡು, ಗ್ರಾಮ ಮತ್ತು ಕುಟುಂಬದ ಯಜಮಾನರ ಹೆಸರು ಕೇಳಿ ಕುಟುಂಬದ ಅನುಮತಿ ಮೇಲೆ ನಾವು ದಿಬ್ಬಣದ ಮುಖ್ಯಸ್ಥರು ಬಂದಿದ್ದೇವೆ, ಎಂದು ಮೂರು ಸಲ ಹೇಳಬೇಕು. ನಮ್ಮ ಬಣ್ಣ ಬಂಗಾರು ಹೇರು ಹರಿವಾಣ ಸಮೇತ ಸೀತಾವಳಿ ಚಪ್ಪರದ ಕೆಳಗೆ ಬರುವುದಕ್ಕೆ ಅನುವು ಬೇಕೆಂದು ಕೇಳುವುದು. ಅನುವು ಆದ ನಂತರ ಚಪ್ಪರದ ಮೇಲ್ಕಟ್ಟಡಿಗೆ ಬರುವುದಕ್ಕೆ ಅನುವು ಕೇಳುವುದು. ಅನುವು ಆದ ನಂತರ ಬಣ್ಣ ಬಂಗಾರ ಇಟ್ಟು ಕುಳಿತುಕೊಳ್ಳುವುದಕ್ಕೆ ಅನುವು ಕೇಳುವುದು. ಅನುವು ಆದ ನಂತರ ಸರ್ವರಿಗೂ ನಮಸ್ಕಾರ ಹೇಳಿ ದೇವಸಭೆಯಲ್ಲಿ ಮೂರು ಜನ ಕುಳಿತುಕೊಳ್ಳುವುದು.

### ದೇವಸಭೆ :

ದೇವಸಭೆ ಎಂದರೆ ಹನ್ನೆರಡು ಕಂಬದ ಚಪ್ಪರದ ನಡುವಿನಲ್ಲಿ ಚಾಪೆ ಹಾಕಿ ವೀಳ್ಯ ಶಾಸ್ತ್ರಕ್ಕೆ ಇಟ್ಟ ಕ್ರಮದಂತೆ ಮಣೆ, ನಂದಾದೀಪ, ಹರಿವಾಣಗಳನ್ನೆಲ್ಲವನ್ನು ಜೋಡಿಸಿದ ಮೇಲ್ಕಟ್ಟ ನಡಿಯಲ್ಲಿ ಬಣ್ಣ ಬಂಗಾರು ಬಳಸಲು ಮತ್ತು ತೆರವಿನ ಹಣ ಕೊಡುವುದಕ್ಕಾಗಿ ಕುಳಿತುಕೊಳ್ಳುವ ಎದುರು ಬದರಿನ ಮೂರು ಜನರ ಸಮೂಹಕ್ಕೆ ದೇವಸಭೆ ಎಂದು ಹೆಸರು.

### ಬಣ್ಣ ಬಂಗಾರ ಬಳಸುವುದು :

ಹಿಂದೆ ಹೇಳಿದ ಕ್ರಮದಂತೆ ಮಾತು ಮುಗಿಸಿ ಕಂಚಿಗೆ ಬಣ್ಣ ಬಂಗಾರ ಬಳಸುವುದಕ್ಕೆ ಅನುವು ಆದ ನಂತರ ಪ್ರಥಮವಾಗಿ ಓಲೆ, ಓಲೆಭಾಗ್ಯ, ಮುತ್ತೈದೆ ಮೂಗು ಬೊಟ್ಟು, ಮುಂತಾದ ಬಂಗಾರವನ್ನು ಮೊದಲು ಬಳಸಿ, ನಂತರ ಬೆಳ್ಳಿ ಸಾಮಾನುಗಳನ್ನು ಬಳಸಿ, ಧಾರೆ ಸೀರೆ, ರವಿಕೆ, ಮುಸುಕಿನ ವಸ್ತ್ರ, ಡಾಬು, ಎಲ್ಲವನ್ನು ವಧುವಿನ ಕಡೆಯವರಿಗೆ ತೋರಿಸಿ, ತಟ್ಟೆಗೆ ಬಳಸುವುದು. [ಕಡಗ, ಕಂಕಣ, ಕಾಲುಂಗುರ] ಹಿಂಗಾರವನ್ನು ಇಟ್ಟಿರಬೇಕು. ಮುತ್ತೈದೆಯರು ತಲೆಗೆ ವಸ್ತ್ರ ಹಾಕಿ ದಿಬ್ಬಣದ ಕಡೆಯಿಂದ ದೀಪ ಹಿಡಿದು ಶೋಭಾನೆ ಹೇಳುತ್ತಾ ನಿಂತಿರುತ್ತಾರೆ. ದೀವಿಗೆಯನ್ನು ಬಹಳ ಜಾಗ್ರತೆಯಿಂದ ನೋಡಿಕೊಳ್ಳುವುದು. ಮತ್ತೊಂದು ಹರಿವಾಣದಲ್ಲಿ ವೀಳ್ಯವನ್ನು ಬಳಸಿ, "ಹತ್ತು ಕುಟುಂಬ ಹದಿನೆಂಟು ಗೋತ್ರ ದೇವಸಭೆಯಲ್ಲಿ, ಸಮಸ್ತರ ಸಂಗಡ ಕೇಳಿ ಬಣ್ಣ ಬಂಗಾರವನ್ನು ಎತ್ತಿಕೊಡುತ್ತೇವೆ" ಎಂದು ಮೂರು ಬಾರಿ ಹೇಳುವುದು.

[ಮುಂದುವರಿಯುವುದು]

# ವಿ ಪ ಯ ರ್ಾ ್ ಸ

**ಮ**ಧ್ಯಾಹ್ನದ ಊಟ ಮುಗಿಸಿ ಮಡಿಕೇರಿಯಲ್ಲಿದ್ದ ನನ್ನ ಸ್ನೇಹಿತರ ಮನೆಗೆ ಹೊರಟಿದ್ದೆ. ಭಾಗಮಂಡಲದಲ್ಲಿ ಬಸ್ಸು ಹತ್ತುವಾಗ ಗಂಟೆ 2–30. ರಶ್ ಇರಲಿಲ್ಲ. ಸೀಟ್‌ಗಳೆಲ್ಲ ಖಾಲಿ. ಕಿಟಕಿಯ ಬಳಿಯ ಸೀಟ್‌ನಲ್ಲಿ ಕುಳಿತು ಏಲಕ್ಕಿ ಬೆಟ್ಟ

**ಬೈತಡ್ಕ ಹೇಮಕುಂಜ್ಞಪ್ಪ,** ಪಾಲೂರು

ಸಾಲುಗಳ ಕಣ್ಮನ ತಣಿಸುವ ಅಪೂರ್ವ ದೃಶ್ಯಗಳನ್ನು ಸವಿಯುತ್ತಾ ಕುಳಿತ್ತಿದ್ದೆ. ನನ್ನ ಪಕ್ಕದ ಸೀಟು ಖಾಲಿ ಇತ್ತು. ಬಸ್ಸು ಚೆಟ್ಟಿಮಾನಿ ತಲುಪಿದಾಗ ಪಕ್ಕದ ಖಾಲಿ ಸೀಟು ಭರ್ತಿಯಾಯಿತು. ಯಾರಿರಬಹುದೆಂದು ಕತ್ತು ಹೊರಳಿಸಿದೆ.

ಮುತ್ತಣ್ಣನವರು ನಮ್ಮ ಹತ್ತಿರದ ಸಂಬಂಧಿಕರು. ಅವರ ಪತ್ನಿ ಪಾರ್ವತಿ. ನಾವೆಲ್ಲ ಮುತ್ತಣ್ಣನವರನ್ನು 'ಮುತ್ತು ಮಾಮ' ಎಂದೂ, ಪಾರ್ವತಿಯವರನ್ನು 'ಪಾರತ್ತೆ' ಎಂದೂ ಪ್ರೀತಿಯಿಂದ ಕರೆಯುತ್ತಿದ್ದೆವು. ವರ್ಷದಲ್ಲಿ 3–4 ಬಾರಿ ಮುತ್ತು ಮಾಮ ಪಾರತ್ತೆ ಜತೆಯಾಗಿಯೇ ಬಂದು ಮನೆಯಲ್ಲಿ ಒಂದೆರಡು ದಿನ ಇದ್ದು ಹೋಗುತ್ತಿದ್ದರು. ಸುಮಾರು 50ರ ಪ್ರಾಯ ಮೀರಿದರೂ ಮುತ್ತು ಮಾಮ ದಂಪತಿಗಳಿಗೆ ಮಕ್ಕಳಿರಲಿಲ್ಲ. ನಾವೆಂದರೆ ಅವರಿಗೆ ಪಂಚಪ್ರಾಣ. ನನ್ನನ್ನು ಪ್ರೀತಿಯಿಂದ 'ಬೇಬಿ' ಎಂದು ಕರೆಯುತ್ತಿದ್ದರು.

ಮುತ್ತುಮಾಮ ಏನೋ ದೊಡ್ಡ ಚಿಂತೆಯಲ್ಲಿದಂತೆ ಕಂಡಿತು. ಪಕ್ಕದಲ್ಲಿ ಕುಳಿತವರು ಯಾರೆಂದು ಗಮನಿಸುವ ಗೋಜಿಗೆ ಹೋಗದೆ ತಲೆಕೆಳಗೆ ಹಾಕಿಕೊಂಡು ಫ್ಲಾಸ್ಕ್, ಟವೆಲ್, ಬೆಡ್‌ಶೀಟ್ ಮತ್ತೇನೇನೊ ಇದ್ದ ಕೈಚೀಲವನ್ನಿಡಲು ಸ್ಥಳ ಹುಡುಕುತ್ತಿದ್ದರು. "ಮುತ್ತು ಮಾಮ ಸೌಖ್ಯನಾ ? ಇಷ್ಟೊತ್ತಿಗೆ ಯಾವ ಕಡೆ ?" ಎಂದೆ. ನನ್ನ ಧ್ವನಿಯ ಗುರುತು ಸಿಕ್ಕಿರಬೇಕು. ಅವರು ಪಕ್ಕನೆ ತಲೆ ಎತ್ತಿ "ಯೇ ಬೇಬಿ, ನೀನಾ ! ನಾನು ನೋಡಲೇ ಇಲ್ಲ. ಮನೆಯಲ್ಲಿ ಎಲ್ಲ ಹೇಗಿದ್ದಾರೆ ?" ಎಂದು ಕೇಳಿದರು. ಎಲ್ಲಾ ಚೆನ್ನಾಗಿದ್ದಾರೆ, ಪಾರತ್ತೆ ಹೇಗಿದ್ದಾರೆ ? ಎಂದೆ.

"ಅದೇ ನೋಡು. ಅವಳಿಗೆ ಸೌಖ್ಯವಿಲ್ಲ. ಮಡಿಕೇರಿಯಲ್ಲಿ ಆಸ್ಪತ್ರೆಗೆ ಸೇರಿಸಿದ್ದೇನೆ. ಮೊನ್ನೆಯಿಂದ ಹೊಟ್ಟೆನೋವು ಸುರುವಾಗಿ ಏನೇನೋ ನಾಡ್‌ಮದ್ದು ಕುಡಿದರೂ ನಿಲ್ಲಲಿಲ್ಲ. ಆಸ್ಪತ್ರೆಗೆ ಹೋಗಿ ತೋರಿಸಿದಾಗ 'ಅಪೆಂಡಿಕ್ಸ್' [ಅಪೆಂಡಿಸೈಟೆಸ್] ಆಗಿದೆ, ಆಪರೇಶನ್ ಆಗಬೇಕು ಎಂದಿದ್ದಾರೆ. ಗೌರ್ನಮೆಂಟ್ ಆಸ್ಪತ್ರೆಯಲ್ಲಿ ಅಡ್ಮಿಟ್ ಆಗಿ ಸ್ಪೆಶಲ್‌ವಾರ್ಡಿನಲ್ಲಿ ಇದ್ದಾಳೆ. ನಾಳೆ ಬೆಳಿಗ್ಗೆ ಆಪರೇಶನ್ ಎಂದರು ತುಂಬ ಆತಂಕದಿಂದ.

ಆಪರೇಶನ್ ಎಂದರೆ ಅದೇಕೋ ಮುತ್ತುಮಾಮ ತುಂಬ ಹೆದರುವುದು ನನಗೆ ಗೊತ್ತಿತ್ತು. ಅದಕ್ಕಾಗಿ ಅವರಲ್ಲಿ ಧೈರ್ಯ ತುಂಬಲು, "ಮಾಮ, ಅಪೆಂಡಿಕ್ಸ್ ಆಪರೇಶನ್‌ತಾನೆ. ದೊಡ್ಡ ಗಾಬರಿ ಇಲ್ಲ ಬಿಡಿ. 7–8 ದಿನಗಳಲ್ಲಿ ಮನೆಗೆ ಬರಬಹುದು. ಅಪೆಂಡಿಕ್ಸ್ ಆಪರೇಶನ್ ಆದರೆ ಮುಂದೆ ಅದರ ಬಾಧೆ ಇಲ್ಲ" ಎಂದೆ.

ಬೇಬಿ, ನಿನಗೆ ಗೊತ್ತಿಲ್ಲ, ಆಪರೇಶನ್ ಆದರೆ ಅವಳು ಖಂಡಿತಾ ಬದುಕುವುದಿಲ್ಲ. ಅವಳ ಜಾತಕ ನೋಡಿಸಿದ್ದೇನೆ. ಈಗ ಅವಳಿಗೆ ಏಳಾರಾಟೆ ಶನಿ. ಪ್ರಾಣಾಪಾಯದ ದೊಡ್ಡ ಕಂಠಕವಿದೆ ಎಂದಿದ್ದಾರೆ ಪಂಡಿತರು. ಕಡೇ ಕಾಲಕ್ಕೆ ಈ ಹಾಳು ಕಾಯಿಲೆ ಬರಬೇಕೆ ! ಎಂದರು ತೀರಾ ನಿರಾಶೆಯಿಂದ.

ಛೇ ಅನ್ನಿಸಿತು ನನಗೆ. "ಮಾಮ, ಕಡೇ ಕಾಲಗೀಲಾಂತ ಏನೆಲ್ಲ ಶನಿ ಮಾತನಾಡಬೇಡಿ. ಜಾತಕ ಗೀತಕ ಎಲ್ಲಾ ಸುಮ್ಮನೆ. ಜಾತಕದಲ್ಲಿ ಬರೆದುದೆಲ್ಲಾ ಸರಿಯಾಗಿಬಿಟ್ಟರೆ ಈ ಪ್ರಪಂಚವೇ ಉಳಿಯುತ್ತಿರಲಿಲ್ಲ. ಟೈಲರ್ ಬಟ್ಟೆ ಕತ್ತರಿಸುವಷ್ಟೇ ಸುಲಭದಲ್ಲಿ ಡಾಕ್ಟರರು ಆಪರೇಶನ್ ಮಾಡಿ ಹೊಲಿದು ಗುಣಪಡಿಸುವ ಈ ಕಾಲದಲ್ಲಿ ಈ ಸಣ್ಣ ಆಪರೇಷನ್‌ಗೆ ಇಷ್ಟು ಹೆದರಿದರೆ ಹೇಗೆ" ಎಂದು ಸಮಾಧಾನ ಹೇಳಿದೆ.

"ಏನಪ್ಪಾ, ನನಗಂತೂ ತುಂಬ ಹೆದರಿಕೆಯಾಗಿದೆ. ಅವಳೇನಾದರು ಹೋಗಿಬಿಟ್ಟರೆ ನನಗೆ ಬದುಕುಂಟೆ ? ನಾನೇ ಮೊದಲು ಹೋಗಿಬಿಡಬೇಕು" ಎಂದರು. ಕಣ್ಣೊರಸಿಕೊಳ್ಳುತ್ತಾ. ಪಾರತ್ತೆಯ ಮೇಲೆ ಮಾಮನಿಗಿದ್ದ ಅಪಾರ ಪ್ರೀತಿಯ ನಿಜವಾದ ಅರಿವು ನನಗೆ ಆದದ್ದು ಆಗ. ಪ್ರೀತಿ ತುಂಬಿದ ಮನಸ್ಸು ನೀರು ತುಂಬಿದ ಬಾವಿಯಂತೆ. ಅದರ ಆಳವನ್ನು ತಿಳಿಯುವುದು ಸುಲಭವಲ್ಲ. ಇದು ಅದೇ ಮಾತು ಬೇಡವೆಂದು ಮಾತು ಬದಲಾಯಿಸಿದೆ. ಅದು ಇದು ಮಾತನಾಡುತ್ತಾ ಟೋಲ್‌ಗೇಟ್ ತಲುಪಿದೆವು.

ಹೇಗೂ ಸ್ನೇಹಿತರ ಮನೆಯಲ್ಲೇ ಉಳಿಯುವುದು, ಪಾರತ್ತೆಯನ್ನು ಮಾತನಾಡಿಸಿಕೊಂಡೆ ಹೋದರಾಯಿತು ಎಂದುಕೊಂಡು ಮಾಮನೊಡನೆ ಆಸ್ಪತ್ರೆಗೆ ಹೋದೆ. ಪಾರತ್ತೆ ಸಾಮಾನ್ಯವಾಗಿಯೇ ಇದ್ದರು. ನಮ್ಮನ್ನು ಕಂಡೊಡನೆ ಹಾಸಿಗೆಯಲ್ಲಿ ಎದ್ದು ಕುಳಿತುಕೊಂಡು ನಮ್ಮೆಲ್ಲರ ಕ್ಷೇಮದ ಬಗ್ಗೆ ವಿಚಾರಿಸಿದರು. ನಾನು

ಅವರಿಗೆ ಧೈರ್ಯ ಹೇಳಿದೆ. ಮಾಮನಷ್ಟು ಗಾಬರಿ ಅವರಿಗಿರಲಿಲ್ಲ. ಮಾಮ ಆ ದಿನ ವಾರ್ಡಿನಲ್ಲಿಯೇ ಮಲಗುವವರಿದ್ದರು. ಸ್ಪೆಷಲ್ ವಾರ್ಡ್ ಆದ ಕಾರಣ ಎಲ್ಲಾ ಅನುಕೂಲಗಳೂ ಇದ್ದವು. ಮಾರನೆಯ ದಿನ ಆಪರೇಶನ್ ಸಮಯಕ್ಕೆ ಬರುವುದಾಗಿ ಹೇಳಿ ನಾನು ಸ್ನೇಹಿತರ ಮನೆಗೆ ಹೊರಟೆ. ಮಾಮ ನನ್ನೊಡನೆ ಅಷ್ಟು ದೂರ ಬಂದು ಆತ್ಮೀಯವಾಗಿ ಬೀಳ್ಕೊಟ್ಟರು.

ಮಾರನೆಯ ದಿನ ಬೆಳಿಗ್ಗೆ 9 ಗಂಟೆಗೆ ಆಸ್ಪತ್ರೆಗೆ ಬಂದೆ. ಪಾರತ್ತೆ ಇದ್ದ ವಾರ್ಡಿನ ತುಂಬ ಜನ ಸೇರಿರುವುದು ದೂರದಿಂದಲೇ ಕಂಡಿತು. ಪಾರತ್ತೆಗೆ ಏನಾದರೂ ಆಗಿ ಹೋಯಿತೇ ಎಂದು ಗಾಬರಿಯಾಯಿತು. ಜೋರಾಗಿ ಅಳುತ್ತಿರುವ ಹೆಣ್ಣಿನ ಧ್ವನಿ ಬೇರೆ ಕೇಳಿ ಬರುತ್ತಿತ್ತು. ಓಡುತ್ತಾ ಹೋಗಿ ಜನರನ್ನು ಆಕಡೆ ಈಕಡೆ ತಳ್ಳಿ ವಾರ್ಡಿಗೆ ನುಗ್ಗಿದೆ. ಏನಾಗಿದೆ ಎಂದು ತಿಳಿದಾಗ ನನ್ನ ಬಾಯಿಯಿಂದ ಮಾತೇ ಹೊರಡಲಿಲ್ಲ. ಮುತ್ತುಮಾಮ ನಿದ್ರೆಯಲ್ಲಿ ಹೃದಯಾಘಾತವಾಗಿ ತೀರಿಕೊಂಡಿದ್ದರು. ಪಾರತ್ತೆ ಬಾಯಿಬಾಯಿ ಬಡಿದುಕೊಂಡು ಅಳುತ್ತಿದ್ದರು. ಜಾತಕದಲ್ಲಿ ಕಂಟಕವಿದ್ದು ಪ್ರಾಣಕ್ಕೆ ಅಪಾಯವಿದ್ದುದು ಪಾರತ್ತೆಗೆ, ಪತ್ನಿಯ ಜಾತಕವನ್ನು ಸಂಪೂರ್ಣ ನಂಬಿ ಅವಳು ಸತ್ತೇ ಹೋಗುತ್ತಾಳೆಂಬ ಭಯದಿಂದ ಹೃದಯಾಘಾತವಾಗಿ ಪ್ರಾಣ ಕಳೆಕೊಂಡವರು ಮುತ್ತುಮಾಮ. "ಅಯ್ಯೋ, ಇದೆಂತಹ ವಿಪರ್ಯಾಸ" ಎಂದುಕೊಂಡೆ. ನನಗರಿವಿಲ್ಲದೆಯೇ ಪಾರತ್ತೆಯನ್ನು ಅಪ್ಪಿಕೊಂಡು ನಾನೂ ಅಳತೊಡಗಿದೆ.

[ಸತ್ಯ ಘಟನೆ, ಕಾಲ್ಪನಿಕ ಹೆಸರುಗಳು]

## ಎರಡಕ್ಷರದ ಮಹತ್ವ

ಮನುಷ್ಯನು
ಹುಟ್ಟು—ಎಂಬ ಎರಡಕ್ಷರದಿಂದ ಬಂದು
ಮಗು—ಎಂಬ ಎರಡಕ್ಷರ ದಾಟಿ
ಅಮ್ಮ, ಅಪ್ಪ—ಎಂಬ ಎರಡಕ್ಷರ ಹೇಳುತ್ತಾ
ಶಾಲೆ—ಎಂಬ ಎರಡಕ್ಷರವನ್ನು ಸೇರಿ
ಗುರು-ಎಂಬ ಎರಡಕ್ಷರದಿಂದ
ವಿದ್ಯೆ—ಎಂಬ ಎರಡಕ್ಷರದ ಜೊತೆ
ಜ್ಞಾನ—ಎಂಬ ಎರಡಕ್ಷರ ಪಡೆದು, ತಾರುಣ್ಯದಲ್ಲಿ
ಲಗ್ನ—ಎಂಬ ಎರಡಕ್ಷರದಿಂದ
ಸತಿ—ಎಂಬ ಎರಡಕ್ಷರವನ್ನು ಪಡೆದು
ಮಗು—ಎಂಬ ಎರಡಕ್ಷರವನ್ನು ಹೊಂದಿ
ತಂದೆ—ಎಂಬ ಎರಡಕ್ಷರದ ಬಿರುದು ಪಡೆದು
ವೃದ್ಧ—ಎಂಬ ಎರಡಕ್ಷರವೆನ್ನಿಸಿಕೊಳ್ಳುತ್ತಾ
ಸಾವು-ಎಂಬ ಎರಡಕ್ಷರದ ಜೊತೆಯಲ್ಲಿ
ಮಾಯವಾಗುತ್ತಾನೆ.

○ **ದೋಲ್ಪಾಡಿ ಜಿ. ಕಾಜಲ್,** ಅಭ್ಯತ್‌ಮಂಗಲ

## – ಸೂಕ್ತಿ –

○ ಸೋರುವ ಮನೆಯಲ್ಲಿ ಮಳೆ ಬೀಳುವಂತೆ, ಬಿಗಿ ಹಿಡಿಯದ ಮನಸ್ಸಿನಲ್ಲಿ ಆಸೆಯು ಒಳ ನುಗ್ಗುತ್ತದೆ.

—ಗೌತಮಬುದ್ಧ

## ಕಾವೇರಿ

ಕೊಡಗಿನ ಕಾವೇರಿ ತಾಯೇ
ಏನಿದು ನಿನ್ನಯ ಮಾಯೇ
ಹಾಡಿ ಹೊಗಳುವೆನು ಮಾತೆ
ನಿನ್ನಯ ಪಾವನ ಗೀತೆ

ಹಸುರಿನ ಬ್ರಹ್ಮಗಿರಿಯು
ಅದರೊಳಗಿಂದ ಹರಿಯುವ ನದಿಯು
ಈ ನಾಡಿನ ಮಣ್ಣನು ಪಾವನ ಗೊಳಿಸಿದೆ
ಹೊನ್ನಿನ ಬೆಳೆಯನು ಈ ಜನರಿಗೆ ಉಣಿಸಿದೆ.

ತನು ಮನ ಧನವನು ಸಿರಿತನ ಗೊಳಿಸಿದೆ
ನಿನ್ನಯ ಚರಣದಿ ನಮ್ಮಯನಿರಿಸಿದೆ
ಕರವನು ಮುಗಿಯುವೆ ಕರುಣೆಯ ತೋರು
ಶಿರವನು ಬಾಗುವೆ ಬಾಳನು ಹರಸು.

ಹಸುರಿನ ಬನಗಳ ತೋರಣ ನಿನ್ನದು
ನವರಸ ಪರಿಸರ ನಾಡದು ನಮ್ಮದು
ನಿನ್ನಯ ಮಡಿಲಲಿ ನಮ್ಮಯ ಬಾಳಿಹುದು
ನೀನಿಲ್ಲದೆ ನಮ್ಮಯ ಬಾಳೆಂದು ಬೆಳಗದು.

ಭಜಿಪೆನು ನಿನ್ನನು ಅನುದಿನ
ನೆನೆವೆನು ನಿನ್ನನು ಪ್ರತಿಕ್ಷಣ
ಕಾಯುತ ಹರಸೆಮ್ಮನು ಬಹುದಿನ.

○ **ತೆಕ್ಕಡೆ ಬಿ. ಕುಮಾರ,** ಮುತ್ತಾರ್ಮುಡಿ.

# ವರದಕ್ಷಿಣೆ ನಮ್ಮ ದೇಶದ ಪ್ರಗತಿಗೆ ಮಾರಕ

**ವ**ರದಕ್ಷಿಣೆ ಎಂದರೆ ವಿವಾಹಕ್ಕೆ ಮೊದಲು ವರನು ವಧುವಿನ ತಂದೆ–ತಾಯಿಯನ್ನು ವೈಯಕ್ತಿಕವಾಗಿ ಇಂತಿಷ್ಟು ಪ್ರಮಾಣದ ಆಸ್ತಿಯನ್ನು ಕೊಡಬೇಕೆಂದು ಕೇಳಿ ಪಡೆಯುತ್ತಾನೆ. ಅದಕ್ಕೆ ಅವರು ಮನಪೂರಕವಾಗಿ ಒಪ್ಪಿ ಕೊಟ್ಟರೆ ಅದು ವರದಕ್ಷಿಣೆಯಾಗುತ್ತದೆ.

**ಹುಲಿಮನೆ ಸವಿತ ರಾಮಣ್ಣ,** ಮಡೆ

ಅಂದರೆ ವಧುವಿನ ಮನೆಯವರು ವರನಿಗೆ ದಕ್ಷಿಣೆಯಾಗಿ ನೀಡುವ ಹಣ, ಆಸ್ತಿ ಪಾಸ್ತಿ, ಚಿನ್ನಾಭರಣ, ಕಟ್ಟಡ, ಇನ್ನಿತರ ವಸ್ತುಗಳು ಇದಕ್ಕೆ ಸೇರುತ್ತದೆ. ವರದಕ್ಷಿಣೆ ಪದ್ಧತಿಯನ್ನು ನಾವು ಇತ್ತೀಚೆಗೆ ಕೇಳಿದ್ದೇವೆಯಾದರೂ ಅದು ದೇಶದಲ್ಲಿ ಹಿಂದಿನ ಕಾಲದಲ್ಲಿಯೂ ಜಾರಿಯಲ್ಲಿತ್ತು.

ಉದಾ : ರಾಮನು ಸೀತೆಯನ್ನು ಸ್ವಯಂವರದಲ್ಲಿ ವಿವಾಹವಾದಾಗ ಸೀತೆಯ ತಂದೆಯಾದ ಜನಕ ಮಹಾರಾಜನು ಸೀತೆಗೆ ಒಂದು ಹಸು ಮತ್ತು ಗೋವಿನ ಹಿಂಡನ್ನು ಬಳುವಳಿಯಾಗಿ ನೀಡಿದ್ದನು. ಈ ರೀತಿಯಲ್ಲಿ ಗಿಡವಾಗಿ ಬೆಳೆಯುತ್ತಿದ್ದ ವರದಕ್ಷಿಣೆ ಪದ್ಧತಿ, ಇಂದು ಹೆಮ್ಮರವಾಗಿ ಬೆಳೆದು ನಿಂತು ಇಂದಿನ ಯುವತಿಯರನ್ನು ಕಾಡುತ್ತಿದೆ.

ವರದಕ್ಷಿಣೆ ಪದ್ಧತಿಯಿಂದ ದೇಶದ ಪ್ರಗತಿಗೆ ಮಾರಕವೇ ಹೊರತು ಪೂರಕವಲ್ಲ. ಇಂದು ಪ್ರತಿಯೊಬ್ಬ ಯುವಕ ವರದಕ್ಷಿಣೆ ಪದ್ಧತಿಯಿಂದ ವಿವಾಹವಾಗುತ್ತಿರುವುದನ್ನು ನಾವು ಕಾಣುತ್ತೇವೆ. ಕೆಳವರ್ಗ, ಮಧ್ಯಮ ವರ್ಗದ ಯುವತಿಯರು ವರದಕ್ಷಿಣೆಯನ್ನು ಕೊಡಲು ಅಸಮರ್ಥರಾಗಿ ವಿವಾಹದಿಂದ ವಂಚಿತರಾಗಿದ್ದಾರೆ. ಅನೇಕ ಯುವತಿಯರು ವಿವಾಹವಾಗದೆ ಹಾಗೆಯೇ ಉಳಿದಿದ್ದಾರೆ. ಇನ್ನು ಕೆಲವರು ತಮ್ಮ ಬಾಳಿನಲ್ಲಿ ಅಡ್ಡಹಾದಿಯನ್ನು ಹಿಡಿದಿದ್ದಾರೆ. ವರದಕ್ಷಿಣೆಯ ವಿಷಯದಲ್ಲಿ ಪತಿ–ಪತ್ನಿಯರಲ್ಲಿ ವೈಷಮ್ಯ ಬೆಳೆದು ವಿವಾಹ ವಿಚ್ಛೇಧನ ಪಡೆಯುತ್ತಾರೆ. ಇವರ ಮಕ್ಕಳು ತಂದೆ ತಾಯಿಯರ ಪ್ರೀತಿಯಿಂದ ವಂಚಿತರಾಗಿ, ಬಾಲಾಪರಾಧಿಗಳಾಗುತ್ತಾರೆ. ಮುಂದೆ ಇವರು ದೇಶಕ್ಕೆ ಕಳಂಕಶಯರಾಗುತ್ತಾರೆ. ಇನ್ನು ಕೆಲವು ಯುವತಿಯರು, ಯುವಕರನ್ನು ಪ್ರೀತಿಸಿ ಕೊನೆಗೆ ವಿವಾಹದ ಸಮಯದಲ್ಲಿ ಆತ ವರದಕ್ಷಿಣೆಯನ್ನು ಕೇಳಿದಾಗ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಹುಡುಗಿಯ ತಂದೆ ಕಡಿಮೆ ವರದಕ್ಷಿಣೆ ನೀಡಿದ್ದರೆ, ಇದರಿಂದ ತೃಪ್ತನಾಗದ ಯುವಕ ತನ್ನ ಪತ್ನಿಗೆ ಯಾವಾಗಲು ಚಿತ್ರಹಿಂಸೆಯನ್ನು ಕೊಡುತ್ತಾನೆ. ಇದರಿಂದ ಆಕೆಯ ಬಾಳು ಕಣ್ಣೀರಿನ ಗೋಳಾಗುತ್ತದೆ. ಇದರಿಂದ ಆಕೆಗೆ ಬುದ್ಧಿಭ್ರಮಣೆಯಾಗಬಹುದು. ವರದಕ್ಷಿಣೆ ಪಡೆದು ವಿವಾಹವಾಗಿದ್ದರೂ ಪುನಃ ಪುನಃ ವರದಕ್ಷಿಣೆಯನ್ನು ತರುವಂತೆ ಪತ್ನಿಯನ್ನು ಒತ್ತಾಯಿಸಿ, ಆಕೆ ತರದಿದ್ದಾಗ ಆಕೆಗೆ ಸೀಮೆಎಣ್ಣೆ ಸುರಿದು ಅಗ್ನಿಹೋಮ ಮಾಡುವಂತಹ ದುರಂತವನ್ನು ನಾವೆಲ್ಲರೂ ಕೇಳಿದ್ದೇವೆ. ಪುನಃ ಈತ ಇದರಿಂದ ತೃಪ್ತನಾಗದೇ ಪುನಃ ವರದಕ್ಷಿಣೆಗೋಸ್ಕರ ಬೇರೆ ಹುಡುಗಿಯನ್ನು ವಿವಾಹವಾಗಿ, ಕೆಲವು ಕಾಲ ಆಕೆಯಲ್ಲಿ ಮೃದುವಾಗಿ ವರ್ತಿಸಿ, ನಂತರ ಆಕೆಯೊಂದಿಗೆ ಪ್ರೇಮುಕನಂತೆ ವರ್ತಿಸಿ, ಸ್ವಲ್ಪ ದಿನಗಳ ನಂತರ ಅವಳನ್ನು ಹಿಂಸಿಸುತ್ತಾನೆ.

ವರದಕ್ಷಿಣೆಗೆ ಹಲವು ಕಾರಣಗಳಿಂದ ವಧುವನ್ನು ಕಾಡುತ್ತಾರೆ. ಅದರಲ್ಲಿ ಮುಖ್ಯವಾದವು ಈ ಕೆಳಗಿನಂತಿವೆ :

1. **ಆರ್ಥಿಕ ಕಾರಣ :** ವಧುವಿನ ಕಡೆಯವರು ಆರ್ಥಿಕವಾಗಿ ಬಲಯುತರಾಗಿದ್ದರೆ, ತಮ್ಮ ಶ್ರೀಮಂತಿಕೆಯನ್ನು ತೋರ್ಪಡಿಸಲು ಅಧಿಕ ಪ್ರಮಾಣದಲ್ಲಿ ವರದಕ್ಷಿಣೆ ಕೊಡುತ್ತಾರೆ. ಈ ಹಣವನ್ನು ಈತ ದುಂದು ವೆಚ್ಚ ಮಾಡುತ್ತಾನೆ.

2. **ಸಾಮಾಜಿಕ ಕಾರಣ :** ಇಂದು ಒಂದು ವಿವಾಹ ನಡೆಯಿತೆಂದರೆ, ಎಷ್ಟು ಹಣ ಕೊಟ್ಟಿದ್ದಾರೆ, ಎಷ್ಟು ಚಿನ್ನಾಭರಣ ಕೊಟ್ಟಿದ್ದಾರೆಂದು ಪ್ರಶ್ನಾರ್ಥಕ ಚಿಹ್ನೆಗಳನ್ನು ಹಾಕುತ್ತಾರೆ.

**ಉದ್ಯೋಗ :** ವರನು ದೊಡ್ಡ ಉದ್ಯೋಗಸ್ತನಾಗಿದ್ದರೆ, ತಮ್ಮ ಮಗಳಿಗೆ ಅಧಿಕ ವರದಕ್ಷಿಣೆ ಕೊಟ್ಟು ವಿವಾಹ ಮಾಡುತ್ತಾರೆ.

4. **ವೈಯಕ್ತಿಕ ಲೋಪದೋಷಗಳು :** ಹುಡುಗಿಯು ವೈಯುಕ್ತಿಕ, ದೈಹಿಕವಾಗಿ ಅಂಗವಿಕಲಳಾಗಿದ್ದರೆ, ಅಂದರೆ ಆಕೆ ಕುಂಠಿ, ಕುರುಡಿ ಅಥವಾ ದೈಹಿಕ ರೋಗಸ್ತಳಾಗಿದ್ದರೆ, ಆ ವರನಿಗೆ ದಕ್ಷಿಣೆ ಕೊಡುತ್ತಾರೆ. ಆತ ಅವನ್ನು ಪಡೆದುಕೊಂಡು ಹಣವನ್ನು ತನ್ನ ಸ್ವಂತ ಖರ್ಚಿಗೆ ಉಪಯೋಗಿಸಿ, ಅವಳನ್ನು ಅರ್ಧ ದಾರಿಯಲ್ಲಿ ಕೈ ಬಿಡುತ್ತಾನೆ. ಇದರಿಂದ ಆಕೆ ಭಿಕ್ಷಾಪಾತ್ರೆ ಹಿಡಿದು ಅಲೆಯಬೇಕಾಗುತ್ತದೆ. ವಿವಾಹ ಎಂಬ ಮಾರುಕಟ್ಟೆಯಲ್ಲಿ ವ್ಯಕ್ತಿಯ ಆರ್ಥಿಕ ಅಂತಸ್ತನ್ನು ಅಳತೆಗೆ ಬಾಗದ ಹೆಚ್ಚು ವರದಕ್ಷಿಣೆ ಗಿಟ್ಟಿಸಿದ ವ್ಯಕ್ತಿ ಸಮಾಜದಲ್ಲಿ ದೊಡ್ಡವನೆನಿಸಿಕೊಳ್ಳುತ್ತಾನೆ ಎಂದು ನಮ್ಮ ಪ್ರತಿಕ್ರಿಯೆ. ಆದರೆ ಸುಸಂಸ್ಕೃತ ವ್ಯಕ್ತಿಯ ದೃಷ್ಟಿಯಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ವ್ಯಕ್ತಿ ಅಪರಾಧಿ. ಆದ್ದರಿಂದ ಸರ್ಕಾರ 1961ರಲ್ಲಿ ವರದಕ್ಷಿಣಾ ಕಾಯ್ದೆಯನ್ನು ಜಾರಿಗೆ ತಂದಿತು. ಅದರ ಪ್ರಕಾರ ವರದಕ್ಷಿಣೆ ಪಡೆದ ವ್ಯಕ್ತಿಗೆ 6 ತಿಂಗಳ ಜೈಲು ಶಿಕ್ಷೆ ಮತ್ತು 5000 ಸಾವಿರ ರೂ. ದಂಡ ವಿದಿಸುತ್ತದೆ. ಆದರೆ ಈ ಕಾಯ್ದೆ ಕೇವಲ ಕಾಗದದಲ್ಲಿ ಕಾಯ್ದೆಯಾಗಿ ಉಳಿದಿದೆ. ಇದಕ್ಕೆ ಕಡಿವಾಣ ಎಂದು ? ●

## ನಮ್ಮೂರು ಹಳ್ಳಿ

ನಮ್ಮೂರು ಆ ಹಳ್ಳಿ । ಜನಿಸಿದುದು ನಾವಲ್ಲಿ।
ಹಳ್ಳಿಯವ ನಾನೆಂದು । ನನಗೆ ಹೆಮ್ಮೆ ॥
ನಾಡ ಜನರಾ ಉದರ । ತುಂಬುವುದೆ ನಾವೆಂದು ।
ನಾಡಿನಲಿ ನಮಗಿಹುದು । ತುಂಬ ಹಿರಿಮೆ ॥

ಕಾಡ ನಡುವೆ ನಮ್ಮ । ನಾಡು ಚೆಲುವಿಹುದಲ್ಲಿ ।
ನೋಡಲ್ಲಿ ಮಾಡುವರು । ಹೊಲದಿ ಉಳುಮೆ ॥
ಹಳ್ಳಿಯರು ನಾವೆಂದು । ನಾಡಿನೇಳಿಗೆಗೆಂದು ।
ಮಾಡುವರು ಕೆಲಸದಲಿ ತೋರಿ ಒಲುಮೆ ॥ ನಮ್ಮೂರು ॥

ಜಲ ಹುಟ್ಟಿ ನೆಲದಲ್ಲಿ । ಹಲವು ಅವು ಜತೆಗೂಡಿ ।
ಹರಿಯುತಿಹ ಆ ಸೊಬಗ । ನೋಡು ಒಮ್ಮೆ ॥
ಬೆಟ್ಟದಾ ತುದಿಯಿಂದ । ಧುಮುಕುತಿಹ ಆ ನೀರು ।
ನೋಡುವಾ ಜನಕದುವೆ । ಕಾರಂಜಿ ಚೆಲುವೆ ॥ ನಮ್ಮೂರು ॥

ಅಡಿಕೆ, ತೆಂಗಿನ ತೋಟ । ಮಾವು ಗೇರಿನ ನೋಟ ।
ಕಾಫಿ, ಕಿತ್ತಳೆ, ಬಾಳೆ । ಯಾಲಕ್ಕಿ ಗೈಮೆ ॥
ಭತ್ತ, ರಾಗಿ, ಜೋಳ । ನಿಂತು ನೋಡುವುದೆಮ್ಮ ।
ಎಂಥ ಸೊಬಗಲಿ ಇಹುದೊ । ಆ ಹಳ್ಳಿ ಸೀಮೆ
॥ ನಮ್ಮೂರು ॥

ಮಣ್ಣೆ ಮಾತೆಯು ಎಂದು । ಶ್ರಮದಿ ದುಡಿದರೆ ನಾವು ।
ಹಳ್ಳಿಯಲಿ ನಮಗಿಂದು । ಏನು ಕಡಿಮೆ ।
ಸೃಷ್ಟಿ ಸೌಂದರ್ಯವನು । ಸೃಷ್ಟಿಸಿಹಳು ಇಲ್ಲಿ ॥
ಒಳ ದೃಷ್ಟಿಯಲಿ ನೋಡು । ಭೂ ತಾಯ ಮಹಿಮೆ
॥ ನಮ್ಮೂರು ॥

● **ಹೊದ್ದೆಟ್ಟಿ ಭವಾನಿಶಂಕರ್,** ಬೆಂಗಳೂರು

## ಕಾ ತು ರ

"ದುಂಬಿಗೆ ಹೂವಿನ ಮಕರಂದ ಹೀರುವ ಕಾತುರ
ಪ್ರೇಮಿಗೆ ಪ್ರಿಯತಮನ ನೋಡುವ ಆತುರ
ನನಗೆ 'ಕೊಡಗು ಸಂಗಾತಿ' ಪುಸ್ತಕ ಓದುವ ಅವಸರ"

○ **ಚಂಡಿರ ಸುಮಿತ್ರ ಅಪ್ಪಾಜಿ,** ಚೆಯ್ಯಂಡಾಣೆ

## ಹಾಸ್ಯ ಬರಹ

ಆಕಾಶವಾಣಿ, ದುುಂಡಡ್ಕ

ವಾರ್ತೆಗಳು, ಓದುತ್ತಿರುವವರು ಕೋದಂಟಿರಾಯ. ಸಂಪಾಜೆಯಲ್ಲಿ ಸೊಣ ಮತ್ತು ಬಸ್ಸುಗಳ ಭೀಕರ ಅಪಘಾತದಲ್ಲಿ ಸೊಣರಾಯರಿಗೆ ಸಣ್ಣ ಪುಟ್ಟ ಗಾಯಗಳಾಗಿದ್ದು ಬಸ್ ಜಖಂಗೊಂಡಿದೆ. ಸೊಣವನ್ನು ಗ್ಯಾರೇಜಿಗೂ, ಬಸ್ಸನ್ನು ಆರೋಗ್ಯ ಸಂಸ್ಥೆಗೂ ಸೇರಿಸಲಾಗಿದೆ. ಚಂದ್ರಲೋಕದ ಮುಖ್ಯಮಂತ್ರಿ ಶ್ರೀಮತಿ ಬೊಗ್ಗಿಯವರು ನಿಧನ ಹೊಂದಿದ್ದಾರೆ ಇವರ ನಿಧನಕ್ಕೆ ರಾಜ್ಯದ ಗಣ್ಯರು ಶೋಕ ವ್ಯಕ್ತಪಡಿಸಿದ್ದಾರೆ. ಆಕಾಶದಲ್ಲಿ ದುಂಬಿಗಳ ವಿಪರೀತ ಹಾರಾಟದಿಂದಾಗಿ ವಿಮಾನ ಸಂಚಾರಕ್ಕೆ ಅಡ್ಡಿಯಾಗುತ್ತಿದೆ ಎಂದು ವಿಮಾನ ಮುಖ್ಯಮಂತ್ರಿ ಸರ್ ನಳ್ಳಿಯವರು ತಿಳಿಸಿದ್ದಾರೆ. ಈ ದಿನ ಚಂದ್ರಲೋಕದಲ್ಲಿ ಭಾರತ ಮತ್ತು ಕರ್ನಾಟಕ ನಡುವೆ ನಡೆದ ಕಬಡ್ಡಿ ಪಂದ್ಯದಲ್ಲಿ ನಿರ್ಣಾಯಕರು ಭೂಲೋಕಕ್ಕೆ ಬಿದ್ದು ಆಟ ಸ್ಥಗಿತಗೊಂಡಿದೆ. ಶ್ರೀ ಸೊಳ್ಳೆಯವರ ಆಕಸ್ಮಾತ್ ಮರಣಕ್ಕೆ ಮುಖ್ಯಮಂತ್ರಿ ಈರುಳ್ಳಿರಾಯರು ಶೋಕ ವ್ಯಕ್ತಪಡಿಸಿದ್ದಾರೆ. ತೊಡಿಕಾನದಲ್ಲಿ ಆನೆಗೆ ಚಡ್ಡಿ ಹಾಕುವ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತದೆ ಎಂದು ಜಿಲ್ಲಾಧಿಕಾರಿ ಹೇಳಿದ್ದಾರೆ, ನಂತರ ಸ್ಪರ್ಧಾಳುಗಳ ಸತತ ಪ್ರಯತ್ನದಿಂದ ಉಪಗ್ರಹ ABCDಯನ್ನು ಆಕಾಶ ಕಕ್ಷೆಯಲ್ಲಿ ಸೇರಿಸಲಾಗಿದೆ.

ಈ ವಾರ್ತೆಯನ್ನು ಆಕಾಶವಾಣಿಯಿಂದ ಕೇಳುತ್ತಿದ್ದೀರಿ.

ಇನ್ನು ಕೆಲವೇ ದಿನಗಳಲ್ಲಿ ಸುಳ್ಯದಲ್ಲಿ ಹರಿಯುತ್ತಿರುವ ಕೇರ್ಪಳದ ಹೊಳೆಯಲ್ಲಿ ರೈಲು ಸಂಚಾರವು ಆರಂಭಗೊಳ್ಳಲಿದೆ. ನಿನ್ನೆ ಒಂದ ಭೀಕರ 0.5 ಸೆಂ.ಮೀ. ಮಳೆಯಲ್ಲಿ ಸಗಣಿಯೊಂದಿಗೆ ಸಗಣಿ ಹುಳು ಕೊಚ್ಚಿಹೋಗಿ ದೇಶದ ಸಂಪತ್ತು ಮಣ್ಣು ಪಾಲಾಗಿದೆ. ನಿನ್ನೆ ವೀರಪ್ಪನ್ ಸಹಚರರು ನಡೆಸಿದ ಧಾಳಿಯಿಂದ 5 ಇರುವೆಗಳು ಮರಣ ಹೊಂದಿದೆ.

ಹವಾಮಾನ ವರದಿ : ನಾಳೆ ಮಟ್ಟ ಮಧ್ಯಾಹ್ನ ಭೀಕರ ಗುಡುಗು ಮಿಂಚಿನಿಂದ ಕೂಡಿದ ಉರಿ ಬಿಸಿಲು ಬರುವಂತೆ ಸೂಚನೆ ಇದೆ. ನಾಳೆ ಸಂಜೆ ಭೀಕರ ಚಂಡ ಮಾರುತ ಬೀಸುವುದಾಗಿ ಅರಂತೋಡಿನ ತೋಡು, ಬಾವಿಗಳಿಗೆ ಗಾಳ ಹಾಕುವವರಿಗೆ ಮುನ್ನೆಚ್ಚರಿಕೆ ನೀಡಲಾಗಿದೆ.

ಇಲ್ಲಿಗೆ ವಾರ್ತಾಪ್ರಸಾರ ಮುಕ್ತಾಯವಾಯಿತು. ನಮಸ್ಕಾರ.

● **ಡಿ. ಜೆ. ವನಜಾಕ್ಷಿ ರಾಘವೇಂದ್ರ,** ಸುಳ್ಯ.

[4ನೇ ಪುಟದಿಂದ]
ತ್ತಿದೆಯಷ್ಟೆ. ಪ್ರತ್ಯೇಕ ರಾಜ್ಯವಾದರೆ ಸುಮಾರು 10–15 ಮಂದಿ ಶಾಸಕರಿರ ಬೇಕು. 5–6 ಮಂದಿ ಕ್ಯಾಬಿನೆಟ್ ಮಂತ್ರಿಗಳಿರಬೇಕಾಗುತ್ತದೆ. ಆಡಳಿತಕ್ಕೆ ಸಂಬಂಧಪಟ್ಟಂತೆ ಪೊಲೀಸ್ ಇಲಾಖೆಯನ್ನೇ ತೆಗೆದುಕೊಳ್ಳಿ ಈಗ ಎಸ್ಪಿಯವರು ಆಡಳಿತ ನಿರ್ವಹಿಸಿದರೆ ರಾಜ್ಯವಾದ ಮೇಲೆ ಐ.ಜಿ.ಪಿ. ಬೇಕಾಗುತ್ತಾರೆ, ಇನ್ನು ನಮ್ಮ ರಕ್ಷಣೆಗಾಗಿ ಕೇಂದ್ರ ಸರ್ಕಾರಕ್ಕೆ ತೆರಿಗೆ ಸಲ್ಲಿಸಲೇಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಕೊಡಗಿನಿಂದ ಹೊರ ಜಿಲ್ಲೆಗಳಿಗೆ ಹೋಗಿ ನೆಲಸಿರುವವರ ಸಂಖ್ಯೆಯೇ ಹೆಚ್ಚಿರುವಾಗ, ಈಗ ಕೊಡಗಿನವರೆಂದರೆ ಒಳ್ಳೆಯ ಅಭಿಪ್ರಾಯವನ್ನು ಹೊಂದಿರುವ ಹೊರಗಿನ ಜನ ನಮ್ಮವರನ್ನು ದೂರ ಮಾಡಬಹುದು. ಒಟ್ಟಿನಲ್ಲಿ ಅಭಿವೃದ್ಧಿಗಿಂತ ಸಮಸ್ಯೆಯನ್ನು ತಂದೊಡ್ಡುವುದೇ ಜಾಸ್ತಿ. ನಮ್ಮ ಪಕ್ಷ ಸಣ್ಣ ರಾಜ್ಯಗಳಿಗೆ ಒತ್ತು ನೀಡುತ್ತಿದೆ. ನಿಜ, ಅದು ಉತ್ತರ ಪ್ರದೇಶದಂತಹ 15 ಕೋಟಿ ಜನಸಂಖ್ಯೆಯಿರುವಲ್ಲಿ, ಇಲ್ಲಿಯ 5 ಲಕ್ಷ ಜನಸಂಖ್ಯೆಗೆ ಪ್ರತ್ಯೇಕ ರಾಜ್ಯಕೇಳುವುದು ಸಮಂಜಸವೆನಿಸದು.

**ಸಂ :** ನಮ್ಮ ಯುವ ಜನತೆಗೆ ನಿಮ್ಮ ಕರೆಯೇನು ?

**ಉ :** ನಮ್ಮ ಯುವಕರು ಮಣ್ಣನ್ನು ಪ್ರೀತಿಸಬೇಕು. ವಿದ್ಯೆಯನ್ನು ಪಡೆದ ಮಾತ್ರಕ್ಕೆ ಉದ್ಯೋಗವೇ ದೊರೆಯಬೇಕೆಂದೇನಿಲ್ಲ. ನನ್ನ ಮಗ ರೈತನಾಗಬಾರದೆಂಬ ತಪ್ಪು ಕಲ್ಪನೆ ನಮ್ಮ ಪೋಷಕರಲ್ಲಿ ಅತಿಯಾಗಿಬಿಟ್ಟಿದೆ. ವೈಜ್ಞಾನಿಕ ಕೃಷಿ ಪದ್ಧತಿಯನ್ನನುಸರಿಸಿದರೆ ಕೇವಲ 2ಎಕರೆ ಜಮೀನಿನಲ್ಲಿ ಸುಖಸಂಸಾರ ಮಾಡಬಹುದು. ಕೇವಲ 900–1000 ರೂ. ಗಳಿಗೆ ನಮ್ಮ ಯುವ ಜನರು ಮೈಸೂರು ಬೆಂಗಳೂರುಗಳಲ್ಲಿ ಕೆಲಸಕ್ಕೆ ಸೇರಿ ಕೆಟ್ಟ ಗುಣಗಳನ್ನು ಮೈಗೂಡಿಸಿಕೊಳ್ಳುತ್ತಿದ್ದಾರಷ್ಟೆ. ಇಷ್ಟೇ ಅಲ್ಲದೆ ಇದು ಪರವೂರಿನವರಿಗೆ ಇಲ್ಲಿ ಬಂದು ನೆಲಿಸಲು ಅವಕಾಶ ಮಾಡಿಕೊಡುತ್ತದೆ. ಕೇರಳದ ಅತ್ಯುತ್ತಮ ಮಣ್ಣು ಇಲ್ಲಿಯ ಕಳಪೆ ಮಣ್ಣಿಗೆ ಸಮ. ಹಾಗಿರುವಾಗ ಇಲ್ಲಿಯ ನೆಲ, ಬಲವನ್ನು ಉಪಯೋಗಿಸಿ ಅಭಿವೃದ್ಧಿ ಹೊಂದಬೇಕು. ವಿದ್ಯಾವಂತ ಯುವಕರು ಹಳ್ಳಿಗಳಲ್ಲಿ ನೆಲೆ ನಿಲ್ಲಬೇಕು. ಆದರೆ ಇಂದು ಒಬ್ಬ ಬಿ.ಎ. ಮಾಡಿದವನು ನೇಗಿಲು ಹಿಡಿದುಬಿಟ್ಟರೆ ಅದೊಂದು ದೊಡ್ಡತಪ್ಪು ಎಂದು ಜನ ಭಾವಿಸಿ ಏನಾದರು ಹೇಳಿ ಅಲ್ಲಿಂದ ಕಳಿಸಿ ಬಿಡುತ್ತಾರೆ. ವಿದ್ಯಾವಂತರೆಲ್ಲ ಹೊರ ಹೋದ ಮೇಲೆ ಊರು ಎಷ್ಟು ಅಭಿವೃದ್ಧಿ ಹೊಂದೀತು ?

**ಸಂ :** ನಮ್ಮ ಸಂಸ್ಕೃತಿ, ಆಚಾರ ವಿಚಾರಗಳು ದೂರದರ್ಶನವಲ್ಲಿ ಪ್ರಚಾರಗೊಳ್ಳಬೇಕೇ ?

**ಉ :** ಕೆಲವು ಜನಾಂಗದವರು ಆ ತಪ್ಪನ್ನೂ ಮಾಡುತ್ತಿದ್ದಾರೆ. ನಮ್ಮದೇ ಬೇರೆ ವೇಷ, ಭೂಷಣ ಎಂಬುದನ್ನು ತೋರಿಸಲು ಹೋಗುತ್ತಾರೆ. ಇದರಿಂದ ಇವರು ಮುಖ್ಯವಾಹಿನಿಯಿಂದ ದೂರ ಸರಿದು ಬಿಡುವ ಅಪಾಯವಿದೆ. ನಮ್ಮ ಪದ್ಧತಿಗಳನ್ನು ಬಿಡಬಾರದು. ಅದು ಆಚಾರದಲ್ಲಿರಬೇಕೇ ಹೊರತು ಪ್ರಚಾರದಲ್ಲಿ ಅಲ್ಲ. ಒಂದು ಜನಾಂಗಕ್ಕೆ ಬೇರೆ ನೀರು ಕಲ್ಪಿಸಲಾಗುತ್ತದೆಯೇ ? ನಾವೆಲ್ಲ ಇತರ ಜನಾಂಗದವರೊಡನೆ ಅಣ್ಣ ತಮ್ಮಂದಿರಂತೆ ಬಾಳಬೇಕು. ಬ್ರಿಟೀಷರ ಒಡೆದು ಆಳುವ ನೀತಿಯಿಂದಾಗಿ ಅಂದಿನ ಭೇದಭಾವ ಇಂದಿಗೂ ಉಳಿದು ಬಂದಿದೆ. ಅದನ್ನು ತಕ್ಷಣ ನಿವಾರಿಸದಿದ್ದರೆ ಮೂರನೇ ಶಕ್ತಿಗಳು ನಮ್ಮೊಳಗೆ ನುಸುಳಿಬಿಡುತ್ತವೆ.

ಗೌಡ ಜನಾಂಗದ ಮೇರು ವ್ಯಕ್ತಿಗಳಲ್ಲಿ ಒಬ್ಬರಾಗಿದ್ದ ದಿ|| ದಂಬೆಕೋಡಿ ಸುಬ್ರಾಯ ಮತ್ತು ದಿ|| ರಾಮಕ್ಕ ದಂಪತಿಗಳ 8 ಜನ ಮಕ್ಕಳಲ್ಲಿ 4ನೆಯ ಮಗನಾಗಿ ಜನಿಸಿದ ಮಾದಪ್ಪನವರು ಬಿ.ಇ. ಪದವಿ ಪಡೆದು ಮಡೆನಾಡಿನ ಗೌರವಯುತ ಮನೆತನದ ಹುದೇರಿ ಬೆಳ್ಯಪ್ಪನವರ ಮಗಳು ಮೀನಾಕ್ಷಿಯವರನ್ನು ವಿವಾಹವಾಗಿ ಕೀರ್ತಿಗೊಬ್ಬ ಆರತಿಗೊಬ್ಬ ಮಗಳೊಡನೆ ಚಿಕ್ಕ ಚೊಕ್ಕ ಸಂಸಾರ ನಡೆಸುತ್ತಿದ್ದಾರೆ. ಮಗ ಭೀಷ್ಮ ಅಗ್ರಿಕಲ್ಚರ್ ಮಾರ್ಕೆಟಿಂಗ್‌ನಲ್ಲಿ ಪದವಿ ಪಡೆಯುತ್ತಿದ್ದರೆ ಮಗಳು ಶ್ರುತಿ 9ನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಳೆ. ಅಕ್ಟೋಬರ್ 5ರ ಪ್ರಜಾವಾಣಿ ಪತ್ರಿಕೆ ಇವರ ಜನಪರ ಕಾರ್ಯವನ್ನು 'ಮಾದರಿ ಶ್ರಮದಾನ' ಎಂದು ಕರೆದಿರುವುದು ಇವರ ಸಾಧನೆಗೆ ಕೈಗನ್ನಡಿಯಾಗಿದೆ.

ಯಾರೇ ಸಿಗಲಿ, ಬಡವರಾಗಲಿ, ಬಲ್ಲಿದರಾಗಲಿ, ಹಿರಿಯರಾಗಲಿ ಕಿರಿಯರಾಗಲಿ, ಕಂಡೊಡನೆ ಕೈಜೋಡಿಸಿ, ಎರಡೂ ಕೈಗಳಿಂದಲೂ ಹಸ್ತಲಾಘವ ನೀಡಿ, ನಂತರ ಹೆಗಲ ಮೇಲೆ ಕೈಯಾಡಿಸಿ, ಪುನಃ ಮೈದಡವಿ ಕುಶಲ ವಿಚಾರಿಸುವ ಇವರ ವರ್ಚಸ್ಸು, ವೇದಿಕೆಯೇರಿ ತನ್ನ ಸಿಂಹ ಕಂಠದಿಂದ ಜನಾಕರ್ಷಿಸಿ, ರಾಷ್ಟ್ರಭಕ್ತಿಯನ್ನು ಅವರಂತರಾಳಕ್ಕೆ ಎರಕ ಹೊಯ್ದುಬಿಡುವ ಪರಿಯೇ ಇವರ ಗೆಲುವಿನ ಒಡಲಾಳ. ಆದರೆ ಈಗ ಜಿಲ್ಲೆಯಲ್ಲಿ ಬಿ.ಜೆ.ಪಿ.ಗೆ ಗರಬಡಿಯುತ್ತಿದೆ. ಮತದಾರ ತೀರ್ಮಾನಕ್ಕೆ ಬರುವ ಮೊದಲೇ ಎಚ್ಚೆತ್ತುಕೊಂಡರೆ ಅದಕ್ಕೆ ಭವಿಷ್ಯವಿದೆ. ಮಾದಪ್ಪನವರಲ್ಲಿ ಅದನ್ನು ಮುನ್ನಡೆಸುವ ಶಕ್ತಿ ಅಡಗಿದೆ. ಅದೇನೇ ಇದ್ದರೂ ರಾಜಕೀಯ ತರಾತುರಿಯ ನಡುವೆಯೂ 'ಸಂಗಾತಿ'ಯೊಡನೆ ಸುದೀರ್ಘವಾಗಿ ಚರ್ಚಿಸಿ ಸೂಕ್ತ ಸಲಹೆ ನೀಡಿದ ಕೆಚ್ಚೆದೆಯ ಶಾಸಕರಿಗೆ ಶುಭಕೋರಿ ಧನ್ಯವಾದಗಳನ್ನರ್ಪಿಸುತ್ತೇವೆ.

—0—

## ಟೀಕೆ–ಟಿಪ್ಪಣಿ

## ಆಕಾಶವಾಣಿ ಕೆಲವರ ಸ್ವತ್ತಾಗಿದೆಯೇ ?

ನಮ್ಮ ಕೊಡಗಿನಲ್ಲೊಂದು ಎಫ್. ಎಂ. ಆಕಾಶವಾಣಿ ಕೇಂದ್ರವಿರುವ ವಿಷಯ ನಮಗೆಲ್ಲಾ ತಿಳಿದದ್ದೇ ಆಗಿದೆ. ಇದರಲ್ಲಿ ಈಗ 30 ನಿಮಿಷಗಳ ಕೊಡವ ಕಾರ್ಯಕ್ರಮ 'ಕೊಡವ ಸಿರಿ' ಹಾಗೆಯೇ ಮಲೆಯಾಳಂ ಗೀತೆಗಳ 'ಮಧುರ ಗೀತಂ' ಎಂಬ ಕಾರ್ಯಕ್ರಮ ಪ್ರಸಾರವಾಗುತ್ತಿದೆ. ಹೆಚ್ಚು ಕಡಿಮೆ ಕೊಡವ ಮತ್ತು ಮಲೆಯಾಳಿ ಜನಾಂಗಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಗೌಡ ಜನಾಂಗದವರು ಕೊಡಗು ಜಿಲ್ಲೆಯಲ್ಲಿ ಇರುವುದು ಈ ಸಂಪರ್ಕ ಮಾಧ್ಯಮಕ್ಕೆ ತಿಳಿದಿರುವ ವಿಚಾರವೆ. ಆದರೂ ಅರೆಭಾಷೆಯ ಒಂದೇ ಒಂದು ನಿರ್ಧಿಷ್ಟ ಕಾರ್ಯಕ್ರಮ ಮಡಿಕೇರಿ ಆಕಾಶವಾಣಿಯಿಂದ ಪ್ರಸಾರವಾಗುತ್ತಿಲ್ಲ. ಇದರ ಬಗ್ಗೆ ಆಕಾಶವಾಣಿಯನ್ನು ಸಂಪರ್ಕಿಸಿದಾಗ 'ಸಮಯ ಸಿಕ್ಕಾಗ ಪ್ರಸಾರ ಮಾಡುತ್ತೇವೆ, ನಮ್ಮ ಗಮನದಲ್ಲಿ ಇದೆ' ಎನ್ನುವ ಜಾರಿಕೆಯ ಉತ್ತರ ದೊರೆಯುತ್ತದೆ. ಆಕಾಶವಾಣಿಯ ಈ ಮಲತಾಯಿ ಧೋರಣೆ ಎಷ್ಟು ಸರಿ ? ಇದರ ಬಗ್ಗೆ ಜನ ಪ್ರಶ್ನಿಸುವ ಮೊದಲೇ ಆಕಾಶವಾಣಿ ಕ್ರಮ ಕೈಗೊಳ್ಳುವುದು ಉಚಿತವೆನಿಸುತ್ತದೆ. ನಮ್ಮ ಭಾಷೆಯ ಒಂದು ಕಾರ್ಯಕ್ರಮ ಆಕಾಶವಾಣಿಯಂತಹ ಜನಪ್ರಿಯ ಮಾಧ್ಯಮದಲ್ಲಿ ಮೂಡಿಬಂದರೆ ನಮಗೊಂದು ಹೆಮ್ಮೆಯಲ್ಲವೇ? ಗರಿಷ್ಠ ಪ್ರಮಾಣದಲ್ಲಿರುವ ಜನಾಂಗದ ಭಾಷೆಯಾದ ಅರೆಭಾಷೆಗೆ ಪ್ರಾಶಸ್ತ್ಯ ಕೊಡುವುದು ಸಮಂಜಸವಲ್ಲವೆ ? ಇದರ ಬಗ್ಗೆ 'ಕೊಡಗು ಸಂಗಾತಿ' ಸಂಬಂಧಪಟ್ಟವರ ಗಮನ ಸೆಳೆಯಲಿ.

● **ಪೊನ್ನೇಟಿ ಬಿ. ಸುನೀಲ್,**
ಭಾಗಮಂಡಲ

## ಡಾ|| ಹೆಚ್. ಸಿ. ಮಹಾದೇವಪ್ಪನವರಿಗೆ "ಹಲ್ಲು ನೋವು" ಗೊತ್ತಿದೆಯೇ ?

ಆರೋಗ್ಯ ಮಂತ್ರಿಗೆ 'ಹಲ್ಲುನೋವು' ಗೊತ್ತಿದ್ದರೆ, 2 ವರ್ಷದಿಂದ ದಂತ ವೈದ್ಯರನ್ನು ನೇಮಿಸದೇ ಇರುತ್ತಿರಲಿಲ್ಲ. ಎರಡು ಸಾವಿರ ಇಸವಿ ವೇಳೆಗೆ ಎಲ್ಲರಿಗೂ ಆರೋಗ್ಯ ನೀಡುವ ಪರಿ ಇದೆಯೇನು ? ಕೆಲವು ದಿನಗಳ ಹಿಂದೆ ಮಡಿಕೇರಿ ಜಿಲ್ಲಾ ಆಸ್ಪತ್ರೆಗೆ ಹಲ್ಲುನೋವಿನ ಚಿಕಿತ್ಸೆಗೆಂದು ಹೋದಾಗ ಚಿಕಿತ್ಸಾಲಯಕ್ಕೆ ಬೀಗ ! ಒಮ್ಮೆ ಗರಬಡಿದಂತಾಯ್ತು. ಹೀಗೆ ಗರಬಡಿಸಿಕೊಂಡು ಹಲ್ಲುನೋವಿನ ಜೊತೆಗೆ ಈ ನರಕಯಾತನೆಯನ್ನು ಅದೆಷ್ಟು ಜನ ಅನುಭವಿಸಿರಲಿಕ್ಕಿಲ್ಲ.

ಕೊಡಗು ಸಿರಿವಂತ ಜಿಲ್ಲೆ, ಇಲ್ಲಿ ಯಾರಿಗೂ ಹಲ್ಲು ನೋವು ಬರಲಾರದೆಂದು ತಿಳಿದಿದ್ದಾರೆಯೇ ? ಅಥವಾ ಖಾಸಗಿ ವೈದ್ಯರ ಜೇಬು ತುಂಬಿಸುವ ಹುನ್ನಾರವಲ್ಲಿ ಸರಕಾರ ತೊಡಗಿದೆಯೇ ? ಇನ್ನಾದರೂ ಸರಕಾರ ಎಚ್ಚೆತ್ತು ಕೊಡಗನ್ನೊಳಗೊಂಡಂತೆ ಎಲ್ಲಾ ಜಿಲ್ಲೆಗಳ ಆಸ್ಪತ್ರೆಗಳಿಗೂ ವೈದ್ಯರನ್ನು ನೇಮಿಸಿ, ಸೂಕ್ತ ಔಷಧಗಳನ್ನೊದಗಿಸಿ,ಬಡವರ ಆರೋಗ್ಯ ಸಂರಕ್ಷಿಸುವ ಕಾಯಕದತ್ತ ಮುನ್ನಡೆಯಬಹುದೆಂದು ನಿರೀಕ್ಷಿಸೋಣವೇ ?

● **ಓರ್ವ ನೊಂದ ಹೊರರೋಗಿ,**
ಮುಕ್ಕೋಡ್ಲು.

## ಭಾರತದ ಆಶ್ಚರ್ಯದ ಸಂಗತಿಗಳು

* ದೊಡ್ಡ ಜನಸಂಖ್ಯೆ ಪಟ್ಟಣ–ಕಲ್ಕತ್ತಾ
* ಉದ್ದವಾದ ನದಿ–ಬ್ರಹ್ಮಪುತ್ರ
* ಉದ್ದವಾದ ಸರೋವರ–ಚೌಲರ ಸರೋವರ [ಕಾಶ್ಮೀರ]
* ಎತ್ತರ ಜಲಪಾತ–ಜೋಗ್ ಜಲಪಾತ
* ಉದ್ದವಾದ ವಿದ್ಯುಚ್ಛಕ್ತಿ ರೈಲು ಮಾರ್ಗ - ಕಲ್ಕತ್ತಾದಿಂದ ದೆಹಲಿಗೆ
* ಅತೀ ದೊಡ್ಡ ಸೇತುವೆ - ಗಾಂಧಿ ಸೇತುವೆ [ಪಾಟ್ನ]
* ದೊಡ್ಡ ರೈಲು ಮಾರ್ಗ - ಮಾಂಟಲೀ ಮತ್ತು ಖಂಡಾಲ ಮಾರ್ಗ
* ಅತೀ ಚಿಕ್ಕ ರಾಜ್ಯ [ವಿಸ್ತಾರದಲ್ಲಿ] - ಸಿಕ್ಕಿಂ
* ದೊಡ್ಡ ಮಸೀದಿ - ಜುಮ್ಮ ಮಸೀದಿ [ದೆಹಲಿ]
* ಉದ್ದವಾದ ಸೇತುವೆ - ಹೌರಾ [ಕಲ್ಕತ್ತ]
* ದೊಡ್ಡ ಮರುಭೂಮಿ - ಥಾರ್ ಮರುಭೂಮಿ [ರಾಜಸ್ಥಾನ]
* ದೊಡ್ಡ ಪ್ರಾಣಿ ಸಂಗ್ರಹಾಲಯ - ಅಲಿಪುರ [ಕಲ್ಕತ್ತಾ]
* ಅತಿ ದೊಡ್ಡ ಸುರಂಗಮಾರ್ಗ – ಜವಾಹರ ಸುರಂಗ ಮಾರ್ಗ
* ಎತ್ತರದ ಸೇತುವೆ – ಚಂಬಲ್ ಸೇತುವೆ

● **ಅಂಬ್ರಾಟಿ ಭಗವತಿ ಪ್ರಸಾದ್ ತಮ್ಮಯ್ಯ,**
ಕೋರಂಗಾಲ.

# ನಿಮ್ಮ ಪತ್ರಗಳು

## ಕಾವೇರಿ ನದಿಯಂತೆ ಹರಿಯಲಿ

ಮಾನ್ಯರೇ,

'ಕೊಡಗು ಸಂಗಾತಿ' ಎಂಬ ಪಾಕ್ಷಿಕ ಪತ್ರಿಕೆಯನ್ನು ಓದಿ ತುಂಬಾ ಸಂತೋಷವಾಯಿತು. ಇದಕ್ಕೆ ನನ್ನ ತುಂಬು ಹೃದಯದ ಅಭಿನಂದನೆಗಳು, ಅಲ್ಲದೆ ನಿಮ್ಮ ಪತ್ರಿಕೆ ಕಾವೇರಿ ನದಿಯಂತೆ ಹರಿದು ಹೆಸರುವಾಸಿಯಾಗಲಿ ಎಂದು ನಮ್ಮ ಊರು ದೇವರಲ್ಲಿ ಮತ್ತು ಕುಲದೇವರಲ್ಲಿ ಬೇಡಿಕೊಳ್ಳುವೆ.

● **ಮುದ್ದೈನ ಕಿಶೋರ್ ಮುತ್ತಣ್ಣ,** ಮಡೆನಾಡು

## ಮಲೆನಾಡ ಸಿರಿ

ಮಾನ್ಯರೇ,

"ಕೊಡಗು ಸಂಗಾತಿ" ಎಂಬ ಮಗು ಕೊಡಗು ಜನಾಂಗಕ್ಕೆ ಹೇಗೆ ದೀಪವೋ, ಹಾಗೆಯೇ 'ಕೊಡಗು' ಎಂಬ ಮೂರು ಅಕ್ಷರದ ಮಲ್ಲಿಗೆ ಗಿಡವು ಹೇಗೆ ಪರಿಮಳವೋ ಹಾಗೆಯೇ 'ಕೊಡಗು ಸಂಗಾತಿ'ಯಲ್ಲಿ ಸಂಬಂಧದ ನಗೆಯು ಮೂಡುತ್ತಿರಲಿ.

**ನಡುಮನೆ ಶೈಲಾ ಚಂಗಪ್ಪ,** ಬೆಮೆಲ್ ಮೈಸೂರು.

## ಸಿಗಲಿ ಖ್ಯಾತಿ

ಮಾನ್ಯರೇ,

ನಮ್ಮ ನಿಮ್ಮೆಲ್ಲರ ಸಂಗಾತಿ, ಸಿಗಲಿ ಇದಕ್ಕೆ ಎಲ್ಲೆಡೆ ಖ್ಯಾತಿ, ಹರಡಲಿ ನಮ್ಮೆಲ್ಲರ ಕೊಡಗಿನಾದ್ಯಂತ, ಬೆಳಗಲಿ ನಮ್ಮ ಭಾರತದಾದ್ಯಂತ. ಕಾಯುತ್ತಿರುವೆನು ಸಂಗಾತಿಗಾಗಿ ನಮ್ಮಗಳ ಆಚಾರ ವಿಚಾರವನ್ನ ತಿಳಿಯಲು. ಮೆಚ್ಚಲಿ ಜನರು ಅರೆಗನ್ನಡವನ್ನು. ನಮ್ಮ ನಿಮ್ಮೆಲ್ಲರ ಸಂಗಾತಿ, ಸಿಗಲಿ ಇದಕ್ಕೆ ಎಲ್ಲೆಡೆ ಖ್ಯಾತಿ.

● **ಕಾಶಿಪಳಂಗಪ್ಪ,** ಮಡಿಕೇರಿ.

## ಬೆಳೆಯುವುದರಲ್ಲಿ ಸಂಶಯವಿಲ್ಲ

ಪ್ರಿಯ ಸಂಗಾತಿಗೆ,

ಪ್ರತಿಭೆ, ಸಂಸ್ಕೃತಿಗಳ ಪರಿಚಯ, ಸಾಹಿತ್ಯದ ಜೊತೆಗೆ, ಮನೋರಂಜನೆಗಾಗಿ ಕಥೆ, ಕವನಗಳು ಸಾಕಷ್ಟು ಮೂಡಿಬರಲಿ. ಇದರಿಂದ ಸಂಗಾತಿಗೆ ಸಂಗಾತಿಗಳ ಸಮೂಹ ಬೆಳೆಯುವುದರಲ್ಲಿ ಸಂಶಯವಿಲ್ಲ. ಭಾಷೆಯ ಬೆಳವಣಿಗೆಗೆ ಪುಷ್ಟಿಯಿರಲಿ.

● **ಬಾಲಚಂದ್ರ,** ತಲಕಾವೇರಿ.

## ಸಂಗಾತಿ "ಐ ಲವ್ ಯು"

ಪ್ರಿಯ ಕೊಡಗು ಸಂಗಾತಿ,

ನಾನ್ ಸಣ್ಣತ್ತಿರ್‌ಕಾಕನ 'ಗೌಡ ಸಮಾಜ' ಪುಸ್ತಕಲಿ ಅರೆಭಾಷೆ ಓದಿದ್ ಗ್ಯಾನ ಉಟ್ಟು. ಅದರ ಮ್ಯಾಲೆ ನಾನ್ ಎರಡ್ ತಿಂಗ ರಜಲಿ ಬಾಕನ ಹೆಂಗೋ ನಂಗೆ ಈ ಪುಸ್ತಕ ಓದೋ ಛಾನ್ಸ್ ಸಿಕ್ತ್. ಅಂದೇ ನಾನ್ ಅಡ್ರಸ್ ತಕಂಡ್ ನಿಂಗೆ ಕಾಗ್ದ ಬರ್ದೆ. ದುಡ್ಡ್‌ನಾ ಕಳ್ಸದೇ ಸಂಗಾತಿ ನೀನ್ ನನ್ನತ್ರ ಬಂದದ್ ಕಂಡ್ ನಂಗೆ ಎಷ್ಟ್ ಕುಸಿ ಆತ್ ಗೊತ್ತಾ? ನಂಗಂತೂ ಕೊಡಗು ಸಂಗಾತಿಗೆ 'ಐ ಲವ್ ಯು', ಹೇಳಕುತಾ ಆದೆ.

● **ಅಯ್ಯೇಟರ ಪೊನ್ನಪ್ಪ,** ಜಮ್ಮು ಕಾಶ್ಮೀರ.

## ಪತ್ರಿಕೆಗಾಗಿ ಹುಡುಕಾಡಿದೆ

ಮಾನ್ಯರೇ,

ನಾನು ನೆಂಟರ ಮನೆಗೆ ಹೋಗಿದ್ದಾಗ ಅಲ್ಲಿ "ಕೊಡಗು ಸಂಗಾತಿ"ಯ ಕಂಡು ಸಂತಸ ಪಟ್ಟೆ. ನಾನು ಚಂದದಾರನಾಗ ಬೇಕೆಂದು ಬಯಸಿ ಮಡಿಕೇರಿಯ ಅಂಗಡಿಗಳಲ್ಲಿ ಪತ್ರಿಕೆಗಾಗಿ ಹುಡುಕಾಡಿದೆ. ಕೊನೆಗೆ ಬಸ್‌ಸ್ಟ್ಯಾಂಡಿನ ಬಳಿಯಿರುವ ಪುಸ್ತಕ ಮಳಿಗೆಯಲ್ಲಿ ಪುಸ್ತಕಕೊಂಡು ಸಂತಸದಿ ಮನೆಗೆ ಹಿಂತಿರುಗಿದೆ. ನಮ್ಮ ಜನರ ಏಳಿಗೆಗೆ ಈ ಪತ್ರಿಕೆಯು ಭದ್ರ ಬುನಾದಿಯಾಗಲಿ, ಇಡೀ ಜನಾಂಗ ಈ ಪತ್ರಿಕೆಗೆ ಸಹಕರಿಸುವಂತಾಗಲಿ ಎಂದು ದೇವರಲ್ಲಿ ಬೇಡುತ್ತೇನೆ. ಪತ್ರಿಕೆಯನ್ನು ಪ್ರಕಟಿಸಿದ ಪ್ರತಿಯೊಬ್ಬ ಕಾರ್ಯಕರ್ತರಿಗೂ ಧನ್ಯವಾದಗಳು.

● **ಕಾಯರ ಚಂಗಪ್ಪ,** ಕಳತ್‌ಮಾಡು.

## ಬರಿಯುವ್‌ಕೆ ನಾ ಹಾರೈಸಿನೆ

ಮಾನ್ಯರೇ,

'ಕೊಡಗು ಸಂಗಾತಿ' ಅರೆಭಾಷಿಕ ವಿಭಾಗಲಿ ಬರೆಯುವ ಮಡೆನಾಡಿನ ಬಿ. ಆರ್. ಜೋಯಪ್ಪನವರ ಲೇಖನ ಮತ್ತೆ ಮನೆ ಮದ್ದ್ ಬರೆಯುವ ಕೋಟೆ ಮನೆ ಮನೋಹರರವರ ಲೇಖನಗ, ಇನ್ನೂ ಹೆಚ್ಚಾಗಿ ಕನ್ನಡ ನಾಡ್‌ನ 'ಜೀವನದಿ' ತರಹ 'ಕೊಡಗು ಸಂಗಾತಿ'ಲಿ ಹರ್ದ್ ಬರ್ಲಿಂತ ನಾ ಹಾರೈಸಿನೆ.

● **ಕಟ್ರತನ ಪ್ರಮೀಳಾ ಪ್ರಭಾಕರ್,** ಬೆಂಗಳೂರು.

## ಓದಿಕೆ ಕುದ್ದಲ್ಲಿ ಮಕ್ಕಳ ಜಗಳ

**ಅರೆ ಭಾಷಿಕ ವಿಭಾಗ**

ನಿಲ್ಲ್, ನಿಂಗೆ ನಾ ಹೇಳಿಕೊಡದೆ ಬುಡಿಕಿಲ್ಲೆ. ನನ್ನ ಮೇಲೆ ನೀ ಚಾಡಿ ಹೇಳಿಕೆ ಹೊರ್‌ಟೊಳಲ್ಲಾ ? ನೀ ಏನೇನ್ ಮಾಡೊಳಾಂತ ನಂಗೆ ಲಾಯ್ಕ್ ಗೊತ್ತುಟ್ಟ್. ಮೊನ್ನೆ ದಸರ ನೋಡಿಕೇಂತ ಮಡಿಕೇರಿಗೆ ಹೋದಂವ ಅಪ್ಪನ ಸುರಾಲ್ ಜೋಬ್‌ಂದ ದುಡ್ಡ್ ಕದ್ದ್‌ಕಂಡ್ ಹೋಗೊಳ. ಆ ಪೋಲಿ ಹೈದಂಗಳೊಟ್ಟಿಗೆ ಕೂಡಿಕಂಡ್ ಸಿಗರೇಟ್ ಸೇದಿಯೊಳ."

"ನಿಲ್ಸನೆ ನಿನ್ನ ರಾಗನ. ನೀ ಮಹಾ ಒಳ್ಳೆವುಳೇನೋ ? ಮಳ್ಳಿ ಥರಾ ಇರೊಳು ನೀನ್. ಅಂದ್ ಇಸ್ಕೂಲ್‌ಂದ ಕೊಟ್ಟ ಮಾರ್ಕ್ಸ್‌ಕಾರ್ಡ್‌ನ ಅಪ್ಪಂಗೆ ತೋರ್ಸದೆ ನೀನೇ ಸೈನ್ ಹಾಕಿ "ಅಪ್ಪನೇ ಸೈನ್ ಹಾಕಿದ್ ಸಾರ್" ಅಂತ ರಾಗ ಎಳ್‌ದ್ ಕೊಟ್ಟಲ್ಲಾ ? ಮತ್ತೆ ಪರೀಕ್ಷೆಲಿ ಕಾಪಿ ಮಾಡಿಕೇಂತ ಚೀಟಿ ಬರೆತಿದ್ದಾ ?"

"ನೀನ್ ದಾರಿಲಿರೋ ಕಡ್‌ಂದ್ ಗೂಡಿಗೆ ಕಲ್ಲ್ ಹೊಡ್‌ದೊಳಾ. ಅದ್ ದಾರಿಲಿ ಹೋಗೋಕ್ಕೆಲ್ಲಾ ಕಚ್ಚಿ ರಂಪ ಮಾಡೊಳೊ. ಅದರ್‍ನೆಲ್ಲಾ ಅಪ್ಪನೊಟ್ಟಿಗೆ ಹೇಳ್ನೆ."

"ನೀನ್ ಅದರ್‍ನ ಹೇಳ್ರೆ ನಾನ್ ಇದರ್‍ನ ಹೇಳ್ನೆ."

"ಯಂಥಾ ?"

"ಅದೇ, ಮೊನ್ನೆ ಕೋಳಿ ಗೂಡ್‌ಂದ ಮೊಟ್ಟೆ ತಾಕನ ಬೀಳ್ಸಿ ಒಡ್ಡಾಕಿಬುಟ್ಟ್ ಗೂಡ್‌ಲಿ ಮೊಟ್ಟೆ ಇತ್ತ್‌ಲೆವ್ವಾಂತ ಅವ್ವನೊಟ್ಟಿಗೆ ಸುಳ್ಳ್ ಹೇಳ್‌ದ್ಲಲ್ಲಾ."

"ನೀನೇನ್ ಕಮ್ಮಿ ಸುಳ್ಳ್ ಹೇಳಿಯಾ ? ಅಂದ್ ಮಾಣಿಕ ಎತ್ತ್‌ನ ಕಣ್ಣಿಗೆ ನೀನೇ ಹೊಡ್ಡಂವ. ಆ ಕಣ್ಣ್ ನೀರಾಗಿ ಹೋತು. ಆಗ ಅಪ್ಪ ಮ್ಯಾಲೆ ಮನೆಯವರಕ್ಕಲೆ ಜಗಳಾಡ್ತಲ್ಲಾ. ಆಗ ನೀನ್ ಸುಮ್ಮನಿದ್ದ."

"ಏಯ್ ಮುಚ್ಚ್‌ನೆ ಬಾಯಿ. ಒಳ್ಳೆ ರಬ್ಬಚ್ಚಿನಂಗೆ ಅರ್‌ಚಾಡ್‌ಬಡ. ಕಳ್ದ ತಿಂಗ ನೀನ್ ನೆಂಟ್ರ ಮನೆಗೆ ಹೋಗಿ ಬಾಕನ ಹೂಗಿಡನ ಕದ್ದ್‌ಕಂಡ್ ಬಂದಲ್ಲಾ? ಸೆಂಟ್‌ಕುಪ್ಪಿನ ಹಾರ್‍ಸಿಕಂಡ್ ಬಂದೊಳಲ್ಲಾ."

"ಅದೆಲ್ಲಾ ನಾನೇನ್ ಕದ್ದದಲ್ಲಾ. ಅವೇ ಕೊಟ್ಟದ್."

"ಓಹೋ ಕೊಟ್ಟವೆ, ಕೊಟ್ಟವೆ. ನೀ ಮಾರಾಣಿ ನೋಡ್, ಕೊಡದೆ ಬುಟ್ಟವೆಯಾ ?"

"ಅಂದ್ ನೀ ಬಾಳೆಗೊನೆಂದ ಹಣ್ಣ್ ಕದ್ದ್ ತಿಂದೊಳ."

"ನೀನ್ ? ತೆಂಗಿನಕಾಯಿ ಮತ್ತೆ ಬೆಲ್ಲನ ಅಡಂಗಿಸಿಕಂಡ್ ತಿಂತಿದ್ದಾ". ಅದೆಲ್ಲಾ ನಾ ಹೇಳ್ನೆ.

"ನೀ ಹೇಳ್ರೆ ಹೇಳಿಕ. ನಮ್ಮ ಮಾಸ್ಟ್ರಿಗೆ ನೀ ಬೊಯ್ದದರ ನಾ ಮಾಸ್ಟ್ರಿಗೆ ಹೇಳ್ನೆ.

"ಅಕ್ಕಯ್ಯ ಅಕ್ಕಯ್ಯ ನಿನ್ನ ದಮ್ಮಯ್ಯಂತೇಳ್ನೆ. ನಿಂಗೆ ನಾನೇನೂ ಹೇಳ್ಕಲ್ಲೆ. ಮಾಸ್ಟ್ರಿಗೆ ಬೊಯ್ದದರ ಮಾತ್ರ ಹೇಳ್ಬಡ. ಅಂದ್ ಬಿದ್ದ ಪೆಟ್ಟ್‌ನ ಬರೆಇನ್ನ್ ಉಟ್ಟ್". ನಿನ್ನ ದಮ್ಮಯ್ಯಂತ ದಮ್ಮಯ ಗುಡ್ಡೆ ಹಾಕ್‌ಕನ ಅತ್ತ್‌ಂದ ಅಪ್ಪ ಬಂದೊ. ಮಕ್ಕ ಪುಸ್ತಕ ತಕ್ಕೊಂಡೊ, ಓದಿಕೆ ಬರೆಕೆ ಶುರ್ ಮಾಡಿಕಂಡೊ. ಯಾರಿಗೂ ಹೇಳ್ಕೆ ಹೋತ್ಲೆ. ●

ಬಿ. ಆರ್. ಜೋಯಪ್ಪ, ಮದೆನಾಡು

## ಇನ್‌ಸ್ಪೆಕ್ಷನ್

ಒಂದು ದಿನ ಒಂದು ಹಳ್ಳಿ ಇಸ್ಕೂಲಿಗೆ ಇನ್ಸ್‌ಪೆಕ್ಷನ್‌ಗೆ ಬಂದೆವೆತ. ಒಂದ್ ವಾರ ಮುಂಚೆನೆ ಇಸ್ಕೂಲಿಗೆ ನೋಟೀಸ್ ಬಾತ್. ಇದರ್‍ನ ಕೇಳ್ದ ಹೆಡ್‌ಮಾಸ್ಟ್ರ ಏನಾರ್ ಒಂದ್ ಪ್ರೋಗ್ರಾಂ ಕೊಡಕುಂತ ಯೋಚಿಸಿತ್. ಆ ಪುಟಾಣಿ ಮಕ್ಕಳ್ನ ಕರ್‍ಕಂಡ್ ಪ್ರಾರ್ಥನೆಗೆ ಒಂದ್ ಹಾಡ್‌ನ ಕಲ್ಸಿ ಕೊಡ್ತ್. ಅದ್ ಯಾವುದು ತೇಳ್‌ರೆ "ಗಜಮುಖನೆ ಗಣಪತಿಯೇ ನಿನಗೆ ವಂದನೆ" ಅಂತ. ಆ ಸಣ್ಣ ಪುಟಾಣಿ ಮಕ್ಕಳ್ನ ಕರ್‍ಕಂಡ್ ಕಲ್ಸಿದೋ.

ಇನ್ಸ್‌ಪೆಕ್ಷನ್ ದಿನ ಬಾತ್. ದೀಪ ಬೆಳಗಿ ಆತ್. ಇನ್ನೇನ್ ಪ್ರಾರ್ಥನೆನ ಶುರ್ ಮಾಡ್ವೋ ಮಕ್ಕ. "ಘಜಮುಖನೆ ಘಣಪತಿಯೇ" ಅಂತ ಜೋರಾಗಿ ಶುರ್ ಮಾಡ್ದೋ. ಮಾಸ್ಟ್ರ ಹಿಂದೆಂದ ಸಣ್ಣ "ಗ" ಸಣ್ಣ ಗ ಅಂತ ಹೇಳ್ತೊಳೋ. ಮಕ್ಕ ಅದನೂ, ಸೇರ್‍ಸಿಕಂಡ್ ಸಣ್ಣ ಘಜ ಮುಖನೆ ಸಣ್ಣ ಘಣಪತಿಯೆತ ಜೋರಾಗಿ ಹಾಡ್ವೋ. ಇದರ್‍ನ ಕೇಳಿ ಅಲ್ಲಿದ್ದವ್ಕೆ ನಗಾಡಿಕೆ ಕಲ್ಸಿಯೇ ಕೊಡ್ಬು ಬೇಡ ನೋಡಿ. ಹಂಗೆ ನಗಾಡ್ವೋ.

● ಕಲ್ಲುಮುಟ್ಲು ರೂಪ ಚನ್ನಬಸಪ್ಪ,
ಮರಗೋಡು.

## ನಮ್ಮ ಪಾಡ್

ಜೀವ ಇರ್‌ಕನ ಇದ್ದದೆ
ನೂರೆಂಟ್ ಅವಾಂತರ,
ಸತ್ತ ಮೇಲೆ ಮಾಡ್ವೆ
ತಿಥಿ ಕರ್ಮಾಂತರ.

● ಮುಕ್ಕಾಟಿ ಕುಸುಮಾಕರ ಕಿರಣ್
ಚೇರಂಬಾಣೆ.

# ದೆವ್ವ ಹಿಡ್ದ ಗದ್ದಳ ತಿಂದ ನೆಂಟ

ಒಂದು ದಿನ ಬಾಬಣ್ಣಂಗೆ ಅತ್ತೆ ಮನೆಗೆ ಹೋಗಿ ಗದ್ದಳ ತಿಂಬೊಕುತಾ ಆಶೆ ಆತ್. ಬಾಬಣ್ಣಂಗೆ ಅದೇ ಗ್ರಾಮದ ಹೆಣ್ಣ್ ತಂದದ್. ಆಗಾಗ ಹೋದರೆ ಅತ್ತೆ ಗದ್ದಳ ಮಾಡ್ದಲೆ. ಬಾಬಣ್ಣಂಗೆ ಹೆಣ್ಣ್ ತಾಕಾಕನೇ ಮಾಂವ್ ತೀರಿ ಹೋಗಿತ್ತ್. ಬಾವ, ಎರ್ಡ್ ನಾದಿನಿಕ ಮತ್ತೆ ಬಾವನ ಹೆಣ್ಣ್, ಮಕ್ಕ ಇರುವ ಮನೆ.

ಅವನ ಬಾವಂಗೆ ಸ್ವಲ್ಪ ಕಳ್ಳ್ ಕಾಯಿಸುವ ಅಭ್ಯಾಸ ಇತ್ತ್. ಅಂದ್ ಏನಾತ್ ತೇಳ್ರೆ, ಒಂದು ದೊಡ್ಡ ಗಿರಿರಾಜ ಹುಂಜನ ಕುದ್ಕ ಹಿಡಿಯಕಾಕನ ಅವರ ಸಿಂಗ ನಾಯಿ

**ದೇವಜನ ರಮಣಿ, ಮಾಲ್ದಾರೆ.**

ಮತ್ತೆ ಟೈಗ ನಾಯಿ ಸೇರಿಕಂಡ್ ಕುದ್ಕನ ಬೆದರ್ಸಿ ಒಂದು ಹಾನಿ ಆಗುವ ಹುಂಜನ ಬಚಾವು ಮಾಡ್ಯಳೊ. ಆದರೂ ಹುಂಜ ಒಂದೇ ಘಳಿಗೆಲಿ ಸತ್ತ್‌ಹೋತ್. ಈ ಸುದ್ಧಿ ಮಕ್ಕಳ ಬಾಯಿಂದ ಬಾಯಿಗೆ ಬಾಬಣ್ಣಂಗೆ ಗೊತ್ತಾತ್. ಇವುಕ್ಕೆ ಇಂದ್ ಬುದ್ಧಿ ಕಲ್ಸಕುತೇಳಿ ಅತ್ತೆ ಮನೆಗೆ ಸುಮಾರ್ 6 ಗಂಟೆಗೆ ಹೋತ್. ಬಾವ ಒಳಗೆ ಗುಡ್ಡಲಿ ಒಲೆಮೇಲೆ ಕಳ್ಳಬಟ್ಟಿ ಇಳ್‌ಸ್‌ತಾ ಉಟ್ಟ್. ಕೋಳಿ ಸಾರ್ ಹೋಕಾಕನೇ ಗಮ ಗಮ ವಾಸನೆ ಬರ್ತುಟ್ಟ್. ಬಾವನ ಸೂಟೆ ಹೆಣ್ಣ್ ರೊಟ್ಟ ತಟ್ಟುವ ಸದ್ದ್ ಕೇಳ್‌ತಾ ಉಟ್ಟ್. ಅತ್ತೆ ಬಾಬಣ್ಣ ಬಾಕಾಕನ ಪಿಸಿಪಿಸಿ ಮಾತಾಡಿ ಕಳಸಿಕೆ ನೋಡ್‌ತಾ ಉಟ್ಟ್. ಬಾವ ಒಳ್ಗೆ–ಹೊರ್ಗೆ ಹೋಗ್ತಾ ಬರ್ತಾ ಉಟ್ಟ್. ಬಾವನ ಹೆಣ್ಣ್ ಬ್ಯಾಗ ಕಳ್ಸಿತಾ ಗೊಣಗ್‌ತಾ ಉಟ್ಟ್. ಇದೆಲ್ಲಾ ಬಾಬಣ್ಣಂಗೆ ಕೇಳ್‌ತ್ತಾ ಉಟ್ಟ್. ಬಾಬಣ್ಣ ಬಾವನ ಕಳ್ಳ್ ಕೇಳ್‌ಕಾಕನ ಇಲ್ಲೆ, ಸ್ವಲ್ಪ ಇತ್ತ್. ಎಲ್ಲಾ ಬಂದ್ ಕುಡ್‌ಕಂಡ್ ಹೋಗೊಳೋಂತ ಸುಳ್ಳು ಹೇಳ್ತ್.

ಬಾಬಣ್ಣ ಸ್ವಲ್ಪ ಹೊತ್ತಿಗೆ ಸತ್ತು ಹೋದ ಮಾಂವ ಹಿಡ್ಪಂಗೆ ಹಲ್ಲ್ ಕಚ್ಚಿ ಕಂಡ್ ಮೊಟ್ಟೆ ಕಣ್ಣ್ ಮಾಡಿ ವ್ಯಾಸ ಮಾಡ್ತ್. ಆಗ ಅತ್ತೆ, ಬಾವ, ಬಾವನ ಹೆಣ್ಣ್ ನಾದಿನಿ, ಕಾಮಕ್ಕ, ಎಲ್ಲಾ ಓಡಿ ಬಂದ್ ಬಾಬಣ್ಣನ ಹಿಡ್ಕಂಡೊ. ಬಾವ ಯಾರ್ ನೀನ್ ಎಲ್ಲಿಂದ ಬಂದಾ ಯಾಕೆ ಬಂದತ ಕೇಳ್‌ಕಾಕನ ಬಾಬಣ್ಣ ಮುಖ ಕಣ್ಣ್ ತಿರ್‌ಗಿಸಿ ನಾನ್ ನಿನ್ನ ಅಪ್ಪ. ಅಪ್ಪನ ಚಿಮ್ಮಿನ ಮತ್ತೆ ಬೋಜಕ್ಕನ ಪ್ರೀತಿಲಿ ನೋಡಿಕಂಡ್ ಹೋಕುತಾ ಬಂದೊಳೆ. ನೀನ್ ಅಮ್ಮನ ಲಾಯಿಕ ನೋಡಿಕಾ. ತಂಗಿಕಳ ಲಾಯ್ಕ ಇಳಿಸಿ ಕೊಡು. ಮಕ್ಕಳ ಹೆಣ್ಣನ ಲಾಯ್ಕ ನೋಡಿಕಾತ ಹೇಳ್ತ್. ಪುನಃ ಬಾಬಣ್ಣ ನಿಮ್ಸ್ರತಾ ಇತ್ತ್. ನೀನ್ ಪ್ರೀತಿಲಿ ಬಂದ್ ಪ್ರೀತಿಲಿ ಹೋಗು ಇನ್ನ್ ನಮಿಗೆ ಕಷ್ಟ ಕೊಡುಬ್ಯಾಡತ ಬಾವ, ಅತ್ತೆ ಹೇಳ್ ಕಾಕನ ಇದ್ದಷ್ಟ್ ನಿನ್ನಾತ್ರ. ಈಗ ನಿಂಗೆ ಏನ್ ಬೇಕು ತ, ಅತ್ತೆ ಕೇಳ್ದೊ ನಂಗೆ ಪ್ರೀತಿಲಿ 1 ಗ್ಲಾಸ್ ಕಳ್ಳ್ ಕೊಡಿ ನಾನ್ ಹೋನೆತಾ ಬಾಬಣ್ಣನ ದೆವ್ವ ಹೇಳ್ತ್. ಬಾವ 1ಗ್ಲಾಸ್ ಕಳ್ಳ್ ಕೊಡ್ತ್. ನನ್ನ ಹೆಣ್ಣ್ ಪ್ರೀತಿಲಿ ಕೊಡಲಿ ತೇಳ್ ಕಾಕನ ಅತ್ತೆ ಒಂದು ಗ್ಲಾಸ್ ಕೊಡ್ತ್. ಆದರೆ ಬಾಬಣ್ಣಂಗೆ ಕಳ್ಳ್ ಸ್ವಲ್ಪ ಸಾಲ್ ಕಿಲೆ. ಚಿಮ್ಮಕ್ಕ, ಬೋಜಕ್ಕ, ಕೊಡಲೀಂತ ಹೇಳ್ತ್. ಅವು ಮುಕ್ಕಾಲ್, ಮುಕ್ಕಾಲ್ ಗ್ಲಾಸ್ ಕೊಟ್ಟೊ. ಬಾಬಣ್ಣ ನಾನ್ ಹೋನೆ 'ನಂಗೆ ನೀವು ಮೋಸ ಮಾಡಿ ಕೋಳಿ ರೊಟ್ಟೆ ಮಾಡ್ಯೋಳಲ್ಲ. ಬಾಬಣ್ಣ ಕಳ್ಳ್‌ನ ರಭಸಂದ ಜೋರಾಗಿ ಕಿರಿಚಿತ್. ಒಂದ್ ಸೆಡೆ ಫುಲ್ ಕೋಳಿಮಾಂಸ, 2 ರೊಟ್ಟೆ ಮುರ್ದ್ ಸಾರ್ ಹಾಕಿ ಎಲ್ಲವು ಸೇರಿ ಕೊಟ್ಟೊ. ಹೊಟ್ಟೆ ತುಂಬಾ ತಿಂದ್, ನಾನ್ ಈಗ ಹೋನೆ ಸ್ವಲ್ಪ ಎಲೆ ಅಡಿಕೆ ಗುದ್ದಿ ಕೊಡಿತ ಹೇಳ್‌ಕಾಕನ ಗುದ್ದಿ ಕೊಟ್ಟೋ. ಬಾಬಣ್ಣ ಚೆನ್ನಾಗಿ ತಿಂದ್ ನೆಲಲಿ ಸ್ವಲ್ಪ ಒದ್ದಾಡಿ ಜೂಂಗೆಂಡ್ ಜೂಂಗೆಂಡ್ ಮನೆಗೆ ಹೋತ್. ಅಂದ್‌ಂದ ಬಾಬಣ್ಣ ಅತ್ತೆಮನೆಗೆ ಹೋದರೆ ಒಂದು ಗ್ಲಾಸ್ ಕಳ್ಳ್ ಗದ್ದಳ ಮಾಡಿರೆ ಗದ್ದಳ ಕೊಡುತಿದ್ದೊ. ಅತ್ತೆಕಾ ಹತ್ರ ನೆಂಟ ಆದರು, ದೂರದ ನೆಂಟ ಆದರೂ ಒಂದೇ ಸಮನೆ ಕಾಂಬೋಕು ಅಲಾ.

## ಆಯ್ಕೆ ಆಗೊಳೊ

ಪಾಡಿಚೆಟ್ಟೀರ ಮುತ್ತಣ್ಣ ಉತ್ತಪ್ಪ, **B.A., L.L.B** ವಕೀಲರು ಮತ್ತು ನೋಟರಿ ಪಬ್ಲಿಕ್, ಮಡಿಕೇರಿ, ಇವು ಭಾರತ ಸರಕಾರದ ಸೆಕ್ರೆಟರಿ, ಕಾನೂನು ಮತ್ತೆ ನ್ಯಾಯಾಂಗ ಇವರ ವತಿಂದ ಕೊಡಗು ಜಿಲ್ಲೆ ವ್ಯಾಪ್ತಿಲಿ ನೋಟರಿ ಪಬ್ಲಿಕ್ ಆಗಿ ಐದ್ ವರ್ಷಗಳ ಅವಧಿಗೆ ದಿನಾಂಕ 15–10–1997ಂದ ಇವರ್ನ ನೇಮಿಸೊಳೊ.

ಇವು ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿ ಇಲ್ಲಿ ಕಾನೂನು ಸಲಹೆಗಾರರಾಗಿ ಸಹ ಸುಮಾರ್ ವರ್ಷಂದ ದುಡಿತ್ತಾ ಒಳೊ.

## ನಗೆ ಹನಿ

ಮಾಸ್ಟ್ರು : ಕಾವೇರಿ ಹುಟ್ಟಿದ್ ಎಲ್ಲಿ ?

ಗುಂಡಣ್ಣ : ಕಾವೇರಿ ಹುಟ್ಟಿದ್ ಅವರ ಅಮ್ಮನ ಹೊಟ್ಟೆಲಿ.

○ ದಾಯನ ದೀನು ಶಿವಪ್ಪ, ಮಡಿಕೇರಿ.

# ದಿನಚರಿ

ಕೊಕ್ಕರೆ ಕೋ ಕೋಳಿ ಕೂಂಗಿತ್
ಮೆಲ್ಲನೆ ಹೊತ್ತು ಬೆಳಗಾತ್
ಬಡಕಲ್ ಕೋಣನ ಕಟ್ಟಿಕಂಡ್
ಗದ್ದೆಲಿ ಅಪ್ಪ ಹೂಡುತ್ತಿತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ದೀಪನ ಅವ್ವ ಹೊತ್ತಿಸಿತ್
ಒಲೆಗೆ ಬೆಂಕಿ ಉರಿಸಿತ್
ಒಂದು ಮಡಿಕೆ ಕಾಫಿ ಕಾಸಿತ್

ಕೊಕ್ಕರೆ ಕೋ ಕೋಳಿ ಕೂಂಗಿತ್
ಮಲ್ಲಿ ಗೂಡೆ ಒಟ್ಟಿಗೆ ಎದ್ದತ್
ಪುಸ್ತಕ ಒಂದರ್ನ ಮಗ್ಚಿತ್
ಹಳೆಗನ್ನಡ ಪದ್ಯನ ಜೋರಾಗಿ ಓದಿತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ಮೈಯಿಂದ ಕಂಬಳಿ ಜಾರಿ ಬಿದ್ದತ್
ತುಂಡು ಬೀಡಿ ಮೇಜ್‌ಲಿ ಕುದ್ದಿತ್ತ್
ತಮ್ಮಣ್ಣ ಮಲ್ಗಿದಲ್ಲೆ ತಕಂಡ್ ಸೇದಿತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ಅನ್ನದ ಮಡಿಕೆ ಕೊತ್ತಿ ಮಗ್ಚಿತ್
ಸದ್ದ್ ಕೇಳಿ ನಾಯಿ ಬಾರಿ ಬೊಗಳ್ತ್
ಹಂದಿ ಗೂಡುಂದ ಹೊರ್ಟತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ಅಮ್ಮಣಿ ಗೂಡೆ ಬುತ್ತಿ ಕಟ್ಟಿತ್
ಬ್ಯಾಗ್‌ನ ಹೆಗಲಿಗೆ ಕೋಸಿತ್
ಕಾಲೇಜ್ ಕಡೆಗೆ ಹೊರ್ಟತ್

ಕೊಕ್ಕರೆ ಕೋ ಕೋಳಿ ಕೂಂಗಿತ್
ತಮ್ಮಣ್ಣ ನಾಲ್ಕ್ ರೊಟ್ಟಿ ಮುಕ್ಕಿತ್
ಪ್ಯಾಂಟ್ ಸರ್ಟ್‌ನ ಕೋಸಿತ್
ಪ್ಯಾಟೆಗೆ ಹೋನೆತ ಹೊರ್ಟತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ಅಪ್ಪಯ್ಯ ಗದ್ದೆಲಿ ಹುಲ್ಲು ಕೊಯ್ಯುತ್ತಿತ್ತ್
ಬಾಯಿಲಿ ಬೀಡಿ ಹೊಗೆ ಹೋತಿತ್
ನೀಲವ್ವ ಊಟಕೆ ಬನ್ನಿ ತಾ ಕರತಿತ್ತ್.

ಕೊಕ್ಕರೆ ಕೋ ಕೋಳಿ ಕೂಂಗಿತ್
ಬೆಳ್ಳನೆ ಬೆಳ್ಕ್ ಬೆಳ್ಗಾಗಿತ್
ಕುದ್ಕ ಕಾಡ್‌ಲಿ ಪಾಂಗ್ ಹೊಡೆತ್ತಿತ್
ಕೋಳಿ ಕೂಂಗುದರ್ನ ನಿಲ್ಸಿತ್.

● **ತೆಕ್ಕಡ ಬಿ. ಕುಮಾರ್,** ಮುತ್ತಾರ್ಮುಡಿ.

## ಹಿಂಗೆ ಮಾಡಿ ನೋಡಿ

○ ತೆಂಗಿನ ಎಣ್ಣೆಗೆ ನಿಂಬೆಹಣ್‌ನ ರಸ ಸೇರ್ಸಿ ತಲೆಗೆ ಉಜ್ಜಿ ಮೀದರೆ ಹೊಟ್ಟ್ ಉದುರ್ದು ನಿತ್ತದೆ.

○ ನಿಂಬೇ ಹಣ್ಣ್‌ನ ಹೋಳ್‌ಮಾಡಿ ಅರ್ದ್ ಹಣೆಗೆ ತಿಕ್ಕಿಕಂಡರೆ ತಲೆಬೇನೆ ವಾಸಿ ಆದೆ.

○ ನಿಂಬೆರಸಲಿ ಉಪ್ಪು ಸೇರ್ಸಿ ಕುಡ್ದರೆ ವಾಂತಿಯಾದು ನಿತ್ತದೆ.

○ ನಿಂಬೆರಸಲಿ ಜೇನ್‌ತುಪ್ಪ ಸೇರ್ಸಿ ಮೋರೆಗೆ ತಿಕ್ಕಿರೆ ಮೊಡವೆ ಮಾಯ ಆದೆ.

○ ಎಳ್‌ನೀರಿಗೆ ನಿಂಬೇರಸ ಸೇರ್ಸಿ ಕುಡ್ದರೆ ಹೊಟ್ಟೆ ಬೇನೆ ವಾಸಿ ಆದೆ.

● **ಬಿರುಮಣ್ಣನ ಕೆ. ಪ್ರವೀಣ,** ಮಡೆ.

## ನಗೆ ಬರಹ

ಕರಿಬಸಪ್ಪ : ತೋಟದ ಆಳ್‌ನ ಕರ್ದ್ ಕೇಳ್ತ್ ಇಂದ್ ಎಲ್ಲಾ ಗಿಡಕ್ಕೆ ನೀರ್ ಹಾಕಿದ ತಾ

ಆಳ್ : ಇಂದ್ ಮಳೆ ಬರ್ತಾ ಇತ್ತಲ್ಲ ಅದ್ಕೆ ನೀರ್ ಹಾಕಿತ್ಲೆ ತಾ.

ಕರಿಬಸಪ್ಪ : ಅಯ್ಯೋ ಅವಿವೇಕಿ ಮಳೆ ಬರ್ತಾ ಇದ್ದರೆ ಕೊಡೆ ಹಿಡ್ಕಂಡ್ ನೀರ್ ಹಾಕಕಾಗಿತ್ತಲ್ಲ ತಾ.

● ಸಂಗ್ರಹ : **ಮಳ್ಳಂದಿರ ಎಂ. ಎಸ್. ಆಶಾಶೇಷಗಿರಿ,** ಮರಗೋಡು.

**ಕೊಡಗು ಸಂಗಾತಿ ಪತ್ರಿಕೆನ**
**ತಕಂಡ್ ಓದಿ**

# ಪ್ರಧಾನ ಮಂತ್ರಿ ಗಳ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗ ಯೋಜನೆ

**P.M.R.Y.** ಹೇಳ್ರೆ ಏನ್? ಇದರ್ಂದಾಗುವ ಅನುಕೂಲ ಏನ್ ? ಇದರ ಸದುಪಯೋಗ ನಮ್ಮ ಜನಾಂಗ ಹೇಂಗೆ ಪಡ್ಕ್ಯಣಕ್ಕುತ್ತೇಳುದೇ ಈ ಲೇಖನದ ಉದ್ದೇಶ.

**PMRY**ತ ಹೇಳ್ರೆ "ಪ್ರಧಾನಮಂತ್ರಿಗಳ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗದ ಯೋಜನೆ"ತ ಅರ್ಥ. ಈ ಯೋಜನೆ 2ನೇ ತಾರೀಖ್ ಅಕ್ಟೋಬರ್ 1993ರಿಂದ ಶುರು ಆತ್. ಈ ಯೋಜನೆಲಿ ಒಬ್ಬ ಒಂದು ಲಕ್ಷ ರೂಪಾಯಿಗಂಟ ಏನಾರ್ ಕಾರ್‌ಬಾರ್ ಮಾಡಕ್. ಇದರ್ಲ್ಲಿ

**ಉಳುವಾರನ ತಿಮ್ಮಯ್ಯ**
**ಸುರೇಶ್‌ಕುಮಾರಿ,** ನಿಪ್ಪಾಣಿ.

ಬ್ಯಾಂಕ್ ಜಾಸ್ತಿತೇಳ್ರೆ 80 ಸಾವಿರಗಂಟ ಸಾಲ ಕೊಟ್ಟದೆ. ಶೇಕಡ 15ರಷ್ಟ್ ಸಬ್ಸಿಡಿ ಸರ್ಕಾರ ಕೊಟ್ಟದೆ. ಬರೀ 5% ಅಷ್ಟೆ ಕೈಯಿಂದ ಹಾಕಕು. ಈ ಯೋಜನೆಲಿ ಕಾರ್‌ಖಾನೆ, ಅಂಗಡಿ, ಟೆಲಿಫೋನ್ ಬೂತ್, ಜೆರಾಕ್ಸ್, ಟೈಪಿಂಗ್‌ಲಿ ತರಬೇತಿ ಹೀಂಗೆ ಯಾವುದ್ ಜನಕ್ಕೆ ಅವಶ್ಯಕತೆ ಉಟ್ಟೋ ಅದರ್ನ ಶುರುಮಾಡಕ್. ಈ ಯೋಜನೇದ್ ಲಾಭಪಡಿಯಕ್ಕೆ ಬೇಕಾದ ಕನಿಷ್ಟ ಅರ್ಹತೆಗ ಏನ್‌ತೇಳ್ರೆ...

1. ಆ ವ್ಯಕ್ತಿ 18ರ್ಂದ 35 ವರ್ಷದೊಳಗೆ ಇರಕು.

2. 10ನೇ ಕ್ಲಾಸ್ ಪಾಸ್ ಇಲ್ಲೆ ಫೇಲಾದವ್ಕೂ ಈ ಸೌಲಭ್ಯ ಸಿಕ್ಕದೆ.

3. ITI ಮಾಡ್‌ದವ್ಕೂ ಈ ಸೌಲಭ್ಯ ಸಿಕ್ಕದೆ.

4. ಹೆಣ್ಣ್ ಮಕ್ಕಳಿಗೆ ಈ ಯೋಜನೆಲಿ ಸರ್ಕಾರ ಜಾಸ್ತಿ ಪ್ರೋತ್ಸಾಹ ಕೊಟ್ಟದೆ.

5. ಈ ಯೋಜನೆಲಿ ಸಾಲ ಸಿಕ್ಕೋಕಾರೆ ಬೇರೆ ಬ್ಯಾಂಕ್‌ಗಳ್‌ಲ್ಲಿ ಸಾಲ ಬಾಕಿ ಇರ್‌ಕಾಗದ್.

ಇಷ್ಟ್ ಅರ್ಹತೆ ಇದ್ದವು DIC [ಡಿಸ್ಟ್ರಿಕ್ಟ್ ಇಂಡಸ್ಟ್ರೀಸ್ ಸೆಂಟರ್] ಇಲ್ಲೆ ಇದಿಕ್ಕೆ ಸಂಬಂಧಪಟ್ಟ ಯಾವುದೇ ಸರ್ಕಾರಿ ಆಫೀಸ್ಲಿ ಅರ್ಜಿ ಹಾಕಕ್. ಅವು ಅದರ್ನ ಜಿಲ್ಲಾ PMRY ಮಂಡಳಿಗೆ ಸಾಲ ಕೊಡಕ್ಕಾ ಬೇಡಾನಾತ ತೀರ್ಮಾನ ಮಾಡಿಕೆ ಕಳ್ಸಿಕೊಟ್ಟವೆ. ಅವು ಯಾರ್ ಯಾರ ಅರ್ಹತೆ ಹೇಂಗೆ ಉಟ್ಟುತಾ ನೋಡಿ, ಅವ್ಕೆ ಸರಿಕಂಡ ಅರ್ಜಿಗಳ್ನ ಬೇರೆ ಬೇರೆ ಬ್ಯಾಂಕ್‌ಗಳಿಗೆ ಸಾಲ ಕೊಡೀತಾ ಕಳ್ಸಿಕೊಟ್ಟವೆ. ಬ್ಯಾಂಕ್‌ಗಳಿಗೆ ಆ ಯೋಜನೆ ಮತ್ತೆ ಆ ಮನ್‌ಷ್ಯನ ಮೇಲೆ ನಂಬಿಕೆ ಬಂದರೆ ಸಾಲ ಕೊಟ್ಟವೆ. ಈ ಸಾಲ ಕೊಡಿಕೆ ಮುಂದೆ ಒಂದ್ ತಿಂಗ DIC ಯವು ಟ್ರೈನಿಂಗ್ ಕೊಟ್ಟವೆ. ಮತ್ತೆ ತಿಂಗಳಿಗೆ 500 ರೂಪಾಯಿ ಖರ್ಚಿಗೆಂತೇಳಿ (Stipend) ಸಹ ಕೊಟ್ಟವೆ. ನಮ್ಮ ಗೌಡ ಜನಾಂಗದವು OBC (ಇತರ ಹಿಂದುಳಿದ ವರ್ಗ)ವರ್ಗಲಿ ಬಂದವೆ. ಇಂತವ್ಕೆ ಈ ಯೋಜನೇಲಿ ಶೇಖಡ 27ರಷ್ಟ್ ಸಾಲ ಕೊಡಿಕೆ ಕಾಯ್ದಿರಿಸಿಯೊಳೊ.

ಬ್ಯಾಂಕ್‌ಲಿ ಸಾಲ ಕೊಡ್‌ಕಾಕನ ಯಾವುದೇ ಜಾಮೀನ್ ಕೇಳ್ದುಲೆ. ಬೇರೆ ಗ್ಯಾರೆಂಟಿ ಸಹ ಈ ಯೋಜನೇಲಿ ಬೇಕಿಲ್ಲೆ. ಸಾಲ ಕೊಟ್ಟ ಮೇಲೆ ಆ ದುಡ್ಡ್‌ಲಿ ಮಾಡ್ದ ಆಸ್ತಿ ಹಕ್ಕ್‌ನ ಮಾತ್ರ ಸಾಲ ತೀರ್‌ಕನ ಗಂಟ ಅವರ ಹೆಸರ್‌ಲಿ ಬರ್‌ಸಿಕಂಡವೆ. ಈ ಯೋಜನೇನ 4–5 ಜನ ಸೇರಿ ಬೇಕಾದರೆ ಮಾಡಕ್. ಹೀಂಗೆ ಮಾಡ್ರೆ ದೊಡ್ಡ ಯೋಜನೆನ ಹಾಕಿಕಣಕ್. ಜಾಸ್ತಿ ಸಬ್ಸಿಡಿನು ಸಿಕ್ಕದೆ.

ಈಗಿನ ಕಾಲಲಿ ಯಾರ ಬಾಯಿಲಿ ಕೇಳ್ರೂ ಒಂದೇ ಮಾತ್ "ಬ್ಯಾಂಕ್‌ಲಿ ಸಾಲ ಕೊಡ್ದುಲೇತಾ". ಅಂತವುಕ್ಕೆ ನಾನ್ ಹೇಳ್ದು ಇಷ್ಟೆ. ನಿಮ್ಮನ್ನ್ ನೀವೇ ಕೇಳಿಕಣಿ. ಬ್ಯಾಂಕ್ ಸಾಲ ಕೊಡಿಕೆ ಇರ್‌ದಲ್ಲದೆ ಇನ್ಯಾಕೆ ಇರ್ದು ? ನೀವು ಒಳ್ಳೆ ಯೋಜನೆನ ಹಾಕಿಕಂಡರೆ ಮತ್ತೆ ನಿಮ್ಮ ವ್ಯವಹಾರಲಿ ಅವ್ಕೆ ನಂಬಿಕೆ ಬಂದರೆ ಅವೇ ಹುಡ್ಕಿಕಂಡ್ ಬಂದ್ ನೀವ್ಗೆ ಸಾಲ ಕೊಟ್ಟವೆ. ಸಾಲ ಕೊಟ್ರೆ ಮಾತ್ರ ಬ್ಯಾಂಕ್ ಮುಂದೆ ಬಾಕೆ ಸಾಧ್ಯ. ಅಲ್ಲದೆ ಸರ್ಕಾರ ಬ್ಯಾಂಕ್‌ಗಳ್ಗೆ ವರ್ಷಕ್ಕೆ ಇಂತಿಷ್ಟ್ PMRY ಸಾಲ ಕೊಡಕ್ಕುತ್ತೇಳಿ ಮುಂದೇನೆ ತಿಳಿಸಿದ್ದದೆ. ಬ್ಯಾಂಕ್‌ಗ PMRY ಸಾಲ ಕೊಡಿಕೆ ಹಿಂದೆ ಬೀಳ್ದು ಯಾಕೆತೇಳ್ರೆ ಶೇಖಡ 80 ರಷ್ಟು ಜನ ಸಾಲ ತಕ್ಕೊಂಡವು ವಾಪಾಸ್ಸ್ ಕೊಟ್ಟತ್ಲೆ. ಹೀಂಗೆ ಇರ್‌ಕಾಕನ ಉಳಿದವ್ಕೆ ಸಾಲ ಕೇಳ್ದ ತಕ್ಷಣ ಕೊಡಿಕೆ ಹೇಂಗೆ ಸಾಧ್ಯ ಹೇಳಿ.

ನಾನ್ ಹೇಳ್ದು ಇಷ್ಟೆ. ಎಂತೆತವೊ ಕಳ್ಳಕಾಕರ್ ಬ್ಯಾಂಕ್‌ಂದ ಎಲ್ಲಾ ಸೌಲಭ್ಯನ ತಕ್ಕಂಡ್ ತಿಂದ್ ಹಾಕುವೆ. ಆದರೆ, ನಮ್ಮ ಜನಾಂಗ ಕಷ್ಟ ಸಹಿಸಿಕೆ ಹೆಸರುವಾಸಿಯಾದವು. ನ್ಯಾಯ ನೀತಿ ತೇಳಿಕ್ಕಂಡ್ ಬದ್ಕುವವು. ಇಂತಹ ಯೋಜನೆಗ ಉಟ್ಟುತ್ತೇಳಿ ಸಹ ಗೊತ್ತಿಲ್ಲದವು. ಅಂತವಲ್ಲಾ ಈ ಯೋಜನೆದ್ ಲಾಭ ಪಡಿಯಕ್ಕುತ್ತೇಳ್ದೆ ನನ್ನ ಈ ಲೇಖನದ ಉದ್ದೇಶ.

## ತಲಕಾವೇರಿ ಹುಂಡಿ ಲಾಭಲಿ

1996–97ನೇ ಸಾಲಿನ ಕಾವೇರಿ ಸಂಕ್ರಮಣ ಹಬ್ಬದ ಪ್ರಯುಕ್ತ ಕಾವೇರಿ ಹುಂಡಿಗೆ ರೂ. 84,521 ಬಂದಿದ್ದ್ ಇದ್ ಕಳ್ದ್ ವರ್ಷಕ್ಕಿಂತ ಸುಮಾರ್ 25ಸಾವಿರ ರೂ.ಗಳಷ್ಟ್ ಲಾಭ ಗಳಿಸಿಟ್ಟುತಾ ಗೊತ್ತಾಗುಟು.

"ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ಕೊಡಗು ಜಿಲ್ಲಾ ಪ್ರಧಾನ ಸಂಚಾಲಕರಾಗಿ **ಶ್ರೀ ಕೋಳುಮುಡಿಯನ ಅನಂತಕುಮಾರ್‌ರವರನ್ನು** ಆಯ್ಕೆ ಮಾಡಲಾಗಿದೆ. ಆಸಕ್ತರು ಇಲ್ಲಿ ವ್ಯವಹರಿಸುವಂತೆ ಕೋರಲಾಗಿದೆ.

**ಶ್ರೀ ಕೋಳುಮುಡಿಯನ ಅನಂತ್‌ಕುಮಾರ್**

ಗಾಳಿಬೀಡು ಗ್ರಾಮ ಮತ್ತು ಅಂಚೆ

**ಕಛೇರಿ ವಿಳಾಸ :**

**"ಕೊಡಗು ಸಂಗಾತಿ" ಕಾರ್ಯಾಲಯ**

**C/o ಬೈತಡ್ಕ ಬೆಳ್ಯಪ್ಪ, ನಂ. 21–16**
**ಎಲ್. ಐ. ಸಿ. ಆಫೀಸ್ ಹತ್ತಿರ,**
**ರೇಸ್‌ಕೋರ್ಸ್ ರಸ್ತೆ, ಮಡಿಕೇರಿ**

ದೂರವಾಣಿ : **08272–28047**

---

ನೀನು ನಮ್ಮನ್ನು ಅಗಲಿ ಇಂದಿಗೆ 10 ವರ್ಷಗಳೇ ಕಳೆದರೂ ಸದಾ ನಿನ್ನ ಗುಣ ನಡತೆ ನಮ್ಮಲ್ಲಿ ಅಚ್ಚಳಿಯದೆ ಉಳಿದಿದ್ದು, ನಿನ್ನ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನು ನೀಡಲೆಂದು ಹಾರೈಸುವ.



**ಸಾವಿತ್ರಿ**

ಜನನ : **5–5–1965**

ಮರಣ : **3–11–1987**

ತಂದೆ : **ಎಡಿಕೇರಿ ಈರಪ್ಪ**

ತಾಯಿ : **ಎಡಿಕೇರಿ ಚಿಣ್ಣಮ್ಮ**

ಸಹೋದರರು : ದೇವಯ್ಯ, ಮಂದಣ್ಣ, ಗೋಪಾಲ, ಭರತ

ಸಹೋದರಿಯರು : ಜಾಜಿ, ಪ್ರೇಮಾ, ಧರಣಿ,

ಅತ್ತಿಗೆ/ಭಾವಂದಿರು : ರಾಣಿ, ಲತ, ಪುಷ್ಪಾ, ವನಜ, ಬೋಪಯ್ಯ, ಗಣೇಶ್, ಗಣಪತಿ ಮತ್ತು ಪುಟಾಣಿಗಳು.

K.R.N.N. 240




Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 18 )/A, 6th Main, Vinayakanagar, Mysore-12 Published at Mysore, Editor PATTADA. P. SHEELAMANI, 322, Hinkal Village & Post, (Near Aralikatte) Mysore-570 017 Phone : 516771